# ನವೀನ ಅಭ್ಯಾಸ ಪತ್ರಿಕೆ

**ಪ್ರಾಯೋಗಿಕ:**—(೧) ಪೆಟ್ಟಿಗೆ, ಮನೆ, ಹೊಲ, ಬಾಗಿಲು ಮುಂತಾದ ವಸ್ತುಗಳ ಅಳತೆಗಳನ್ನು ಇಂಚು, ಫೂಟು, ಯಾರ್ಡು ಮೊದಲಾದ ಉದ್ದಳತೆಯ ಮಾಪುಗಳಲ್ಲಿ ಅಳೆಯುವದು. ಎತ್ತರ, ಎದೆ, ಟೊಂಕ, ತೋಳು, ಕುತ್ತಿಗೆ ಈ ಶಾರೀರಿಕ ಭಾಗಗಳ ಅಳತೆ ಮಾಡುವದು.

(೨) ಕೊಟ್ಟ ಉದ್ದಳತೆಯನ್ನು ಅಳೆಯುವದು. (ಸೂಚನೆ:—ಅಳತೆಗಳನ್ನು ಅತಿ ಸಮೀಪದ ಇಂಚಿನ ವರೆಗೆ ಮಾತ್ರ ತೆಗೆದುಕೊಳ್ಳತಕ್ಕದ್ದು.)

(೩) ಗಡಿಯಾರ ನೋಡಿ ವೇಳೆ ಹೇಳುವದು.

(೪) ದಾರದಲ್ಲಿ, ಅಥವಾ ಕಾಟಕೋನ ಚೌಕೋನ ಇಲ್ಲವೆ ವರ್ತುಲಾಕಾರದ ಕಾಗದದ ತುಂಡುಗಳಲ್ಲಿ ೧/೨, ೧/೪, ೧/೮ ಭಾಗಗಳನ್ನು ಕತ್ತರಿಸಿ ತೆಗೆಯುವದು.

(೫) ದೇಶೀಯ ನಾಣ್ಯಗಳನ್ನು ಗುರುತಿಸುವದು. ಬದಲು ನಾಣ್ಯಗಳನ್ನು ಕೊಡುವದು. (ದೊಡ್ಡ ನಾಣ್ಯಕ್ಕೆ ಚಿಲ್ಲರೆ ಕೊಡುವದು.)

(೬) ಮೇಲಿನವುಗಳನ್ನು ಅವಲಂಬಿಸಿದ ಆಟಗಳು.

**ಬಾಯಿಯಿಂದ (ತೋಂಡಿ):**—(೧) ೧೦೦೦ದ ವರೆಗೆ ಸಂಖ್ಯೆಗಳನ್ನು ಎಣಿಸುವದು ಮತ್ತು ಓದುವದು.

(೨) ೧೨×೧೬ ಮತ್ತು ೧೬×೧೦ ಅಂದರೆ ೧೨ರ ಮಗ್ಗಿಯನ್ನು ೧೬ ಪಟ್ಟುಗಳ ವರೆಗೆ ಮತ್ತು ೧೬ರ ಮಗ್ಗಿಯನ್ನು ೧೦ ಪಟ್ಟುಗಳ ವರೆಗೆ ಕಲಿಯತಕ್ಕದ್ದು.

(೩) ಮೇಲಿನ ಮಗ್ಗಿಗಳ ಉಪಯೋಗವನ್ನು ಒಳಗೊಂಡ ಸುಲಭ ಲೆಕ್ಕಗಳು ಮತ್ತು ಪೇಟೆಯ ವ್ಯವಹಾರಗಳು.

ಬರೆಹ:—(೧) ೧,೦೦೦ದ ವರೆಗೆ ಸಂಖ್ಯೆಗಳನ್ನು ಬರೆಯುವದು.

(೨) ಒಂದಕ್ಕಿಂತ ಹೆಚ್ಚು ಕೃತಿ ಅಥವಾ ಎಣಿಕೆಗಳನ್ನೊಳಗೊಂಡ ಬೇರೀಜು, ವಜಾಬಾಕಿಗಳಲ್ಲಿಯ ಹೆಚ್ಚು ಕಠಿಣವಾದ ಲೆಕ್ಕಗಳು.

(೩) ಸುಲಭ ಗುಣಾಕಾರ ಮತ್ತು ಭಾಗಾಕಾರ. × ಮತ್ತು ÷ ಈ ಚಿಹ್ನಗಳ ಉಪಯೋಗ. (ನಿಃಶೇಷ ಭಾಗಾಕಾರ ಮಾತ್ರ.)

[ಅ] ೩ ಪೈ = ೧ ದುಡ್ಡು
೧೨ ಪೈ = ೪ ದು = ೧ ಆಣೆ
೧೯೨ ಪೈ = ೬೪ ದು = ೧೬ ಆ = ೧ ರೂಪಾಯಿ

[ಬ] ೬೦ ಮಿನಿಟು = ೧ ತಾಸು
೨೪ ತಾಸು = ೧ ದಿನ
೭ ದಿನ = ೧ ವಾರ
೩೬೫|೩೬೬ ದಿನ = ೧ ವರುಷ

[ಕ] ೧೨ ಇಂ. = ೧ ಫೂಟು
೩೬ ಇಂ. = ೩ ಫೂ = ೧ ಯಾರು
೧ ಮೊಳ = ೧೮ ಇಂಚು.

(ಮೊಳದಿಂದ ಅಳೆಯುವದು ಹೇಗೆ ಅವಿಶ್ವಸನೀಯವೆಂಬುದನ್ನು ಶಿಕ್ಷಕರು ವಿವರಿಸುತಕ್ಕದ್ದು.)

(೫) ಕೊಳ್ಳುವದು, ಮಾರುವದು ಇವುಗಳಿಗೆ ಸಂಬಂಧಿಸಿದ ಸುಲಭ ಲೆಕ್ಕಗಳು.

(೬) ೧/೨, ೧/೪, ೧/೮, ೧/೧೬ ಇಂಥ ಸುಲಭ ಅಪೂರ್ಣಾಂಕಗಳ ಲೇಖನ. (ಅಂಶವು ಒಂದು "೧" ಇರತಕ್ಕದ್ದು.)

ಪಠ್ಯಪುಸ್ತಕ ಸಮಿತಿಯಿಂದ ಮಂಜೂ



# ನೂತನ ಗಣಿತ

[ಪ್ರಾಥಮಿಕ ಎರಡನೆಯ ವರ್ಗಕ್ಕಾಗಿ]





“ ಗಲಗಲಿ ”

೧೯೫೩ ]        ವಿದ್ಯಾರ್ಥಿಯಾವೃತ್ತಿ        [ ೦—೮—೦

# ನನ್ನ ನುಡಿ



ಗಣಿತಕ್ಕಾಗಿ ಗಣಿತವೆನ್ನದೆ, ಜೀವನಕ್ಕಾಗಿ ಗಣಿತವೆಂಬ ತತ್ವವನ್ನು ಅನುಸರಿಸಿ ಈ ಕೃತಿಯು ರಚನೆಯಾಗಿದೆ. ಮೂಲಶಿಕ್ಷಣದ ಧ್ಯೇಯವಾದರೂ ಇದೇ ಆಗಿದೆ. ಮಕ್ಕಳ ಜ್ಞಾನದ ಮಟ್ಟ, ಅನುಭವಗಳನ್ನು ಎದುರಿಗಿಟ್ಟುಕೊಂಡೇ ಲೆಕ್ಕಗಳನ್ನು ಹೆಣೆಯಲಾಗಿದೆ. ಅಂತೇ ಬಾಯಿಲೆಕ್ಕಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟಿರುವೆ. ಇವುಗಳಿಂದ ಗಣಿತ ವಿಷಯು ಜಡವೆನಿಸದೆ ಸಹಜವೂ ಸ್ವಾಭಾವಿಕವೂ ಆಗಬಲ್ಲದು. "ಮಕ್ಕಳ ಆಟಗಳು" ಎಂಬ ನವೀನ ವಿಭಾಗ ಸೇರಿಸಿದುದು ಮಾದರಿಯದಾಗಿದೆ. ಒಟ್ಟಿನಲ್ಲಿ ಈ ಕೃತಿಯು ಸರಕಾರದವರಿಗೂ, ಶಿಕ್ಷಕರಿಗೂ, ವಿದ್ಯಾರ್ಥಿಗಳಿಗೂ ಮೆಚ್ಚಿಗೆಯಾಗಬಲ್ಲದೆಂಬ ಆತ್ಮವಿಶ್ವಾಸವನ್ನು ತಳೆದು ನನ್ನ ನುಡಿ ಮುಗಿಸುವೆ.

೩೦—೮—೪೯ —ಗಲಗಲಿ

## ಪರಿವಿಡಿ



 : ಎರಡನೆಯ ಮುದ್ರಣ

ಮುದ್ರಕರು:
ರಾಮಚಂದ್ರ ಪಾಂಡುರಂಗ ವಿನೀತ
ಉದಯ ಮುದ್ರಣಾಲಯ, ಧಾರವಾಡ.

ಪ್ರಕಾಶಕರು:
ಕೆ. ಕೆ. ಗಲಗಲಿ
ಸವದತ್ತಿ.

# ನೂತನ ಗಣಿತ



## ೧ ಕೂಡಿಸುವದು

★

[೧]

**ವಿಶಿಷ್ಟ ಉದಾ:** [ಅ] ಒಬ್ಬ ಅಂಗಡಿಕಾರನು ಮುಂಜಾನೆ ೩ ತಕಲಿಗಳನ್ನೂ ಮಧ್ಯಾಹ್ನದಲ್ಲಿ ೨ ತಕಲಿಗಳನ್ನೂ ಮಾರಿದನು. ಆದರೆ ಆತನು ಮಾರಿದ ಒಟ್ಟು ತಕಲಿಗಳೆಷ್ಟು?

ಈಗ ೩ ತಕಲಿ ಮತ್ತು ೨ ತಕಲಿ ಕೂಡಿಸತಕ್ಕದ್ದಿದೆ.

[ಬ]` ಮಹಾಂತೇಶನು ಪೇಟೆಗೆ ಹೋಗಿ ೪ ಆ. ಸಕ್ಕರೆ, ೩ ಆ. ಬೆಲ್ಲ, ೨ ಆ. ಜೀರಿಗೆ ತಂದನು. ಅವನು ಎಲ್ಲ ವಸ್ತುಗಳಿಗೆ ಕೊಟ್ಟ ಒಟ್ಟು ಬೆಲೆ ಎಷ್ಟು?

ಇಲ್ಲಿ ೪ ಆ., ೩ ಆ., ೨ ಆಣೆಗಳನ್ನು ಕೂಡಿಸತಕ್ಕದ್ದಿದೆ.

ಈ ರೀತಿ ಒಂದೇ **ಜಾತಿಯ ಸಂಖ್ಯೆಗಳನ್ನು ಒಟ್ಟು ಗೂಡಿಸುವದಕ್ಕೇ ಬೇರೀಜು ಎಂದು ಅನ್ನುತ್ತಾರೆ.** ಮೇಲಿನ ಲೆಕ್ಕಗಳು ಬೇರೀಜಿನವು. ಅವುಗಳನ್ನು ಮುಂದಿನಂತೆ ಬಿಡಿಸುತ್ತಾರೆ.

**ವಿವರಣೆ:**

(೧)

| | |
|---|---|
| | ೩ ತಕಲಿಗಳು. |
| + | ೨ ತಕಲಿಗಳು. |
| | ೫ ತಕಲಿಗಳು. |

(೨)

| | |
|---|---|
| | ೪ ಆಣೆ |
| + | ೩ ಆಣೆ |
| + | ೨ ಆಣೆ |
| | ೯ ಆಣೆ. |

ಇನ್ನೊಂದು ರೀತಿ:

(೧) ೩ ತಕಲಿ + ೨ ತಕಲಿ = ೫ ತಕಲಿಗಳು.

(೨) ೪ ಆಣೆ + ೩ ಆಣೆ + ೨ ಆಣೆ = ೯ ಆಣೆಗಳು.

ಮೇಲಿನ ಲೆಕ್ಕಗಳಲ್ಲಿ + ಗುರುತು ಉಪಯೋಗಿಸಿದೆ. ಅದಕ್ಕೆ "**ಅಧಿಕ ಚಿಹ್ನ**" ಎಂದು ಅನ್ನುವರು. ಕೂಡಿಸತಕ್ಕ ಸಂಖ್ಯೆಯ ಹಿಂದೆ ಬರೆಯುತ್ತಾರೆ. ಮತ್ತು ಮೇಲಿನ ಲೆಕ್ಕಗಳಲ್ಲಿ = ಈ ಗುರುತು ಉಪಯೋಗಿಸಿದ್ದು ಅದಕ್ಕೆ "**ಬರೋಬರಿ ಚಿಹ್ನ**" ಎಂದು ಅನ್ನುತ್ತಾರೆ.

(೧) ಕೆಳಗೆ ಕೆಲವು ವಸ್ತುಗಳನ್ನೂ ಅವುಗಳ ಬೆಲೆಯನ್ನೂ ಕೊಟ್ಟಿದೆ.



ಮುಂದೆ ಬರೆದಂತೆ ಮಕ್ಕಳು ವಸ್ತುಗಳನ್ನು ಕೊಂಡಿದ್ದು ಪ್ರತಿಯೊಬ್ಬರು ಕೊಡಬೇಕಾದ ಹಣವೆಷ್ಟೆಂಬುದನ್ನು ತೆಗೆಯಿರಿ.

(ಅ) **ಹನುಮಂತ**— ೧ ಪುಸ್ತಕ ಮತ್ತು ೧ ಚೆಂಡು
(ಬ) **ಕಮಲೆ**— ೧ ತಕಲಿ ಮತ್ತು ೧ ಗೊಂಬೆ
(ಕ) **ನೀಲಪ್ಪ**— ೧ ಪೆನ್ಸಿಲು ಮತ್ತು ೧ ಚೀಲ
(ಡ) **ಸರಲೆ**— ೧ ಗೊಂಬೆ ಮತ್ತು ೧ ಪೆನ್ಸಿಲು

ಮೊದಲನೇ ವರ್ಗದಲ್ಲಿ ಹರಳುಗಳನ್ನಾಗಲಿ ಬೊಟ್ಟುಗಳನ್ನಾಗಲಿ ಎಣಿಸಿ ಲೆಕ್ಕ ಮಾಡುತ್ತಿದ್ದಿರಿ. ಇನ್ನು ಮುಂದೆ ಈ ಹೊಸ ವರ್ಗದಲ್ಲಿ ಹಾಗೆ ವಸ್ತುಗಳನ್ನು ಉಪಯೋಗಿಸದೆ ಬಾಯಿಯಿಂದಲೇ ತೀವ್ರವಾಗಿ ಲೆಕ್ಕಗಳನ್ನು ಮಾಡಲು ಕಲಿಯಬೇಕು. ತಕ್ಷಣವೇ ಲೆಕ್ಕ ಮಾಡಲು ಬರಬೇಕಾದರೆ ಕೆಳಗೆ ಬೇರೀಜಿನ ಲೆಕ್ಕಗಳನ್ನು ಕೊಟ್ಟಿದ್ದು ಅವುಗಳನ್ನು ಚೆನ್ನಾಗಿ ಪಾಠಮಾಡಿರಿ.

# ಬೇರೀಜಿನ ಪಟಿಗಳು

ಓದುವದು: ಒಂದರಲ್ಲಿ ಒಂದು ಕೂಡಿದರೆ ಎರಡು. ಒಂದರಲ್ಲಿ ಎರಡು ಕೂಡಿದರೆ ಮೂರು, ಮುಂ.

| | | |
|---|---|---|
| ೧ + ೧ = ೨ | ೨ + ೧ = ೩ | ೩ + ೧ = ೪ |
| ೧ + ೨ = ೩ | ೨ + ೨ = ೪ | ೩ + ೨ = ೫ |
| ೧ + ೩ = ೪ | ೨ + ೩ = ೫ | ೩ + ೩ = ೬ |
| ೧ + ೪ = ೫ | ೨ + ೪ = ೬ | ೩ + ೪ = ೭ |
| ೧ + ೫ = ೬ | ೨ + ೫ = ೭ | ೩ + ೫ = ೮ |
| ೧ + ೬ = ೭ | ೨ + ೬ = ೮ | ೩ + ೬ = ೯ |
| ೧ + ೭ = ೮ | ೨ + ೭ = ೯ | ೩ + ೭ = ೧೦ |
| ೧ + ೮ = ೯ | ೨ + ೮ = ೧೦ | ೩ + ೮ = ೧೧ |
| ೧ + ೯ = ೧೦ | ೨ + ೯ = ೧೧ | ೩ + ೯ = ೧೨ |
| ೧ + ೧೦ = ೧೧ | ೨ + ೧೦ = ೧೨ | ೩ + ೧೦ = ೧೩ |

| | | |
|---|---|---|
| ೫ + ೧ = ೬ | ೭ + ೧ = ೮ | ೯ + ೧ = ೧೦ |
| ೫ + ೨ = ೭ | ೭ + ೨ = ೯ | ೯ + ೨ = ೧೧ |
| ೫ + ೩ = ೮ | ೭ + ೩ = ೧೦ | ೯ + ೩ = ೧೨ |
| ೫ + ೪ = ೯ | ೭ + ೪ = ೧೧ | ೯ + ೪ = ೧೩ |
| ೫ + ೫ = ೧೦ | ೭ + ೫ = ೧೨ | ೯ + ೫ = ೧೪ |
| ೫ + ೬ = ೧೧ | ೭ + ೬ = ೧೩ | ೯ + ೬ = ೧೫ |
| ೫ + ೭ = ೧೨ | ೭ + ೭ = ೧೪ | ೯ + ೭ = ೧೬ |
| ೫ + ೮ = ೧೩ | ೭ + ೮ = ೧೫ | ೯ + ೮ = ೧೭ |
| ೫ + ೯ = ೧೪ | ೭ + ೯ = ೧೬ | ೯ + ೯ = ೧೮ |
| ೫ + ೧೦ = ೧೫ | ೭ + ೧೦ = ೧೭ | ೯ + ೧೦ = ೧೯ |

[ಶಿಕ್ಷಕರು ೪, ೬, ೮ ಈ ಸಂಖ್ಯೆಗಳ ಪಟವನ್ನು ತಯಾರಿಸಿಕೊಳ್ಳಬೇಕು.]

(೫) ಒಂದು ಅಂಗಿಯ ಬೆಲೆ ೫ ರೂ. ಅದೆ. ಇನ್ನು ಕೋಟನ್ನು ಕೊಳ್ಳಬೇಕೆಂದರೆ ಇದಕ್ಕಿಂತ ೧೨ ರೂ. ಹೆಚ್ಚಿಗೆ ಕೊಡ ಬೇಕಾಗುತ್ತದೆ. ಆದರೆ ಕೋಟಿನ ಬೆಲೆ ಎಷ್ಟು?

(೬) ೧ ಪಾಟಿಯನ್ನು ೪ ಆಣೆಗೆ ಕೊಂಡಿತು. ಕೈಚೀಲಕ್ಕೆ ಅದಕ್ಕಿಂತ ೧೧ ಆಣೆ ಹೆಚ್ಚಿಗೆ ಕೊಟ್ಟರೆ ಕೈಚೀಲದ ಬೆಲೆ ಎಷ್ಟು?

(೭) ಕೆಳಗಿನ ಲೆಕ್ಕಗಳನ್ನು ತೀವ್ರ ಬಿಡಿಸಿರಿ.

೨೬+೩; ೨೭+೨; ೨೪+೫; ೨೩+೬; ೨೧+೮

೫೨+೭; ೫೫+೨; ೫೪+೫; ೫೧+೬; ೫೬+೩

## [೨]

ಗುಂಡುಗಳ ೧ ಹತ್ತರ ಗಂಟು ಅಂದರೆ ೧೦ ಬಿಡಿಕಾಳು, ಗುಂಡುಗಳು
ಕಡ್ಡಿಗಳ ೨ ಹತ್ತರ ಗಂಟುಗಳೆಂದರೆ ೨೦ ಬಿಡಿಕಾಳು, ಕಡ್ಡಿಗಳು
ಸೀಸುಗಳ ೪ ಹತ್ತರ ಗಂಟುಗಳೆಂವರೆ ೪೦ ಬಿಡಿಕಾಳು, ಸೀಸುಗಳು
ಇದೇ ರೀತಿ ೫ ಹತ್ತರ ಗಂಟುಗಳೆಂದರೆ ೫೦ ಬಿಡಿಕಾಳು
೬ ಹತ್ತರ ಗಂಟುಗಳೆಂದರೆ ೬೦ ಬಿಡಿಕಾಳು
೭ ಹತ್ತರ ಗಂಟುಗಳೆಂದರೆ ೭೦ ಬಿಡಿಕಾಳು
೮ ಹತ್ತರ ಗಂಟುಗಳೆಂದರೆ ೮೦ ಬಿಡಿಕಾಳು
೯ ಹತ್ತರ ಗಂಟುಗಳೆಂದರೆ ೯೦ ಬಿಡಿಕಾಳು

ಮೇಲಿನ ಹತ್ತರ ಗಂಟು, ಬಿಡಿಕಾಳು ನಿರೀಕ್ಷಿಸಿರಿ. ಹತ್ತರ ಗಂಟಿನ ಮುಂದೆ ಪೂಜಿಯನ್ನಿಟ್ಟರೆ ಆಗುವಷ್ಟು ಬಿಡಿಕಾಳು ಆ ಹತ್ತರ ಗಂಟಿನಲ್ಲಿರುತ್ತವೆ. ಇದು ಸಹಜವಾಗಿ ಕಂಡುಬರುವ ಮಾತು. ಇದೇ ರೀತಿ ೧೨ ಹತ್ತರ ಬಿಡಿಕಾಳುಗಳು (೧೨ರ ಮುಂದೆ ೦) ೧೨೦ ಆಗುವವು. ಆದ್ದರಿಂದ

[ಅ] ೨೩ ಹತ್ತರ ಗಂಟುಗಳಿಗೆ ಬಿಡಿಕಾಳುಗಳು ಎಷ್ಟು?

[ಬ] ೬೪ ಹತ್ತರ ಗಂಟುಗಳಿಗೆ ಬಿಡಿಕಾಳುಗಳು ಎಷ್ಟು?

**ವಿಶಿಷ್ಟ ಉದಾ:** ಒಬ್ಬ ಹುಡುಗನು ೩೦ ಮೊಳ ನೂಲು ನೂತನು. ಮತ್ತೊಬ್ಬನು ೨೦ ಮೊಳ ನೂತನು. ಎರಡನ್ನು ಕೂಡಿಸಿ ಸುತ್ತಿದರೆ ನೂಲಿನ ಉದ್ದಳತೆ ಎಷ್ಟಾಗುತ್ತದೆ?

೩೦ ಮೊಳ ನೂಲಿನಲ್ಲಿ ೨೦ ಮೊಳ ನೂಲನ್ನು ಕೂಡಿಸಿದರೆ ಎಷ್ಟು ಮೊಳ ಆಗುವದೆಂಬುದನ್ನು ತೆಗೆಯಬೇಕಾಗಿದೆ. ಆದ್ದರಿಂದ ಇದು ಬೇರೀಜಿನ ಲೆಕ್ಕ.

೩೦ ಬಿಡಿಕಾಳು ಅಂದರೆ ೩ ಹತ್ತರ ಗಂಟು. ೨೦ ಬಿಡಿಕಾಳೆಂದರೆ ೨ ಹತ್ತರ ಗಂಟು. ಎರಡನ್ನೂ ಕೂಡಿಸಲು (೩+೨=) ೫ ಹತ್ತರ ಗಂಟುಗಳಾದವು. ಅಂದರೆ ೫೦ ಬಿಡಿಕಾಳು. ∴ **೫೦ ಮೊಳ ನೂಲು ಉತ್ತರ.**

| **ಬರೆಹ:** | **ಓದುವದು:** |
|---|---|
| ಹ. ಬಿ. | ಬಿಡಿಕಾಳ ಬೇರೀಜು—೦ ಗೆ ೦ |
| ೩ ೦ ಮೊಳ | (ಪೂಜಿಗೆ ಪೂಜಿ) |
| + ೨ ೦ ಮೊಳ | ಹ. ಗ. ಬೇರೀಜು—೨ ಮತ್ತು ೩ |
| ೫ ೦ ಮೊಳ | ಕೂಡಿದರೆ ೫ ∴ ೫ಕ್ಕೆ ೫ |

**ಲೆಕ್ಕಗಳು**

(ಮೊದಲು ಬಾಯಿಯಿಂದ ಬಿಡಿಸಿರಿ. ಬಳಿಕ ಪಾಟಿಯ ಮೇಲೆ)

(೧) ಬಸಪ್ಪನ ದನಗಳಿಗೆ ಮುಂಜಾನೆ ೫೦ ಪೆಂಡಿ ಮೇವು ಬೇಕಾದರೆ ಸಂಜೆಗೆ ೪೦ ಪೆಂಡಿ ಬೇಕಾಗುತ್ತದೆ. ದಿನಕ್ಕೆ ಅವನ ದನಗಳಿಗೆ ಬೇಕಾಗುವ ಒಟ್ಟು ಪೆಂಡಿಗಳೆಷ್ಟು ?

(೨) ಗುರಪ್ಪನು ೨೦ ಹಂಚಿ ತಯಾರಿಸಿದರೆ ಸುರೇಶನು ೬೦ ಹಂಚಿ ತಯಾರಿಸುವನು. ಇಬ್ಬರೂ ಕೂಡಿದರೆ ತಯಾರಿಸುವ ಹಂಚಿಗಳೆಷ್ಟು ?

(೩) ೪ನೆಯ ವರ್ಗದಲ್ಲಿ ೪೦ ತಕಲಿ, ೩ನೆಯ ವರ್ಗದಲ್ಲಿ ೩೦ ತಕಲಿಗಳಿವೆ. ಆದರೆ ಎರಡೂ ವರ್ಗಗಳಲ್ಲಿ ಕೂಡಿ ಎಷ್ಟು ತಕಲಿಗಳಿವೆ ?

(೪) ಒಂದು ಪುಸ್ತಕದಲ್ಲಿಯ ೫೦ ಪುಟಗಳನ್ನು ಓದಿದ ಬಳಿಕ ಆದರಲ್ಲಿ ಇನ್ನೂ ಓದತಕ್ಕ ೩೦ ಪುಟಗಳು ಅವೆ. ಆದರೆ ಆ ಪುಸ್ತಕದಲ್ಲಿಯ ಒಟ್ಟು ಪುಟಗಳೆಷ್ಟು ?

(೫) ಒಂದನೆಯ ವರ್ಗದಲ್ಲಿ ೪೦, ಎರಡನೆಯ ವರ್ಗದಲ್ಲಿ ೩೦, ಮೂರನೆಯ ವರ್ಗದಲ್ಲಿ ೧೦ ಹುಡುಗರಿದ್ದರೆ ಮೂರೂ ವರ್ಗಗಳಲ್ಲಿ ಇದ್ದ ಹುಡುಗರೆಷ್ಟು?

(೬) ಕುದುರೆಗಳು: ೨೦ + ೩೦ + ೧೦
(೭) ಪುಸ್ತಕಗಳು: ೨೦ + ೫೦ + ೨೦
(೮) ಹಂಚಿಗಳು: ೪೦ + ೩೦ + ೨೦
(೯) ಹತ್ತಿಕಾಳು: ೩೦ + ೩೦ + ೨೦ + ೧೦

(೧೦) ೪೦ ರೂ. ಗಳಿಗೆ ಒಂದರಂತೆ ೨ ಉಣ್ಣೆಯ ಕೋಟುಗಳನ್ನೂ ೭೦ ರೂ. ಕೊಟ್ಟು ೧ ಜರದ ಸೀರೆಯನ್ನೂ ಕೊಂಡರೆ ನಾವು ಕೊಡಬೇಕಾದ ಹಣವೆಷ್ಟು ?

(೧೧) ೪೦ ಸುತ್ತು ನೂಲಿಗೆ ೧ ಚಿಟುಗು ಅನ್ನುತ್ತಾರೆ. ಆದರೆ ೩ ಚಿಟುಗುಗಳಿದ್ದ ನೂಲಿನ ಸುತ್ತುಗಳೆಷ್ಟು ?

[೩]

**ವಿಶಿಷ್ಟ ಉದಾಃ** ಸಾಲೆಯ ತೋಟದಲ್ಲಿ ಒಬ್ಬ ಹುಡುಗನು ೨೧ ಸಸಿಗಳನ್ನು ನೆಟ್ಟನು. ಇನ್ನೊಬ್ಬನು ೯ ಸಸಿಗಳನ್ನು ನೆಟ್ಟನು. ಆದರೆ ಇಬ್ಬರೂ ಕೂಡಿ ನೆಟ್ಟ ಸಸಿಗಳೆಷ್ಟು ?

೨೧ ಸಸಿ ಹಾಗೂ ೯ ಸಸಿ ಕೂಡಿ ಎಷ್ಟಾಗುತ್ತದೆಂಬುದನ್ನು ತೆಗೆಯಬೇಕಾಗಿದೆ. ಆದ್ದರಿಂದ ಇದು ಬೇರೀಜಿನ ಲೆಕ್ಕ.

೨೧ ಅಂದರೆ ೨ ಹ. ಗ.   ೧ ಬಿಡಿ ಕಾಳು
ಇದರಲ್ಲಿ   ೯ ಬಿಡಿ ಕಾಳು ಕೂಡಿಸಬೇಕಾಗಿವೆ.

೯ ಮತ್ತು ೧ ಕೂಡಿ ಹತ್ತು ಬಿಡಿ ಕಾಳಾದವು. ೧೦ ಬಿಡಿ ಕಾಳುಗಳಿಗೆ ೧ ಹತ್ತರ ಗಂಟು ಆಗುತ್ತದೆ. ಈ ೧ ಹತ್ತರ ಗಂಟೂ ಮೊದಲಿನ ಎರಡು ಹತ್ತರ ಗಂಟೂ ಕೂಡಿ ೩ ಹತ್ತರ ಗಂಟುಗಳಾದವು. ೩ ಹತ್ತರ ಗಂಟುಗಳೆಂದರೆ ೩೦. ∴ ೩೦ ಸಸಿಗಳು ಉತ್ತರ.

ಬರೆಹ:

| | ಹ. | ಬಿ. |
|---|---|---|
| | ೨ | ೧ ಸಸಿ |
| + | | ೯ ಸಸಿ |
| | ೧ | |
| | ೩ | ೦ ಸಸಿ |

ಓದುವದು:
ಬಿಡಿಕಾಳ ಬೇರೀಜು— ೯ ಹಾಗೂ ೧ ಕೂಡಿ ಹತ್ತು. ∴ ೧೦ಕ್ಕೆ ೦ ಕೈಲೆ ೧ [ಸೂಚನೆ- ಬಿಡಿ ಕಾಳುಗಳಲ್ಲಿ ಬಂದಷ್ಟು ಹತ್ತರ ಗಂಟುಗಳಿಗೆ "ಕೈಲೆ" ಅನ್ನುತ್ತಾರೆ. ಮತ್ತು ಕೈಲೆ ಹತ್ತರ ಗಂಟುಗಳನ್ನು ಹತ್ತರ ಗಂಟುಗಳ ಕೆಳಗೆ ಜೋಡು ಗೆರೆಯ ಮಧ್ಯದಲ್ಲಿ ಬರೆಯುತ್ತಾರೆ.]
ಹತ್ತರ ಗಂಟುಗಳ ಬೇರೀಜು -- ೨ ಹಾಗೂ ೧ ಕೂಡಿದರೆ ೩. ∴ ೩ ಕ್ಕೆ ೩.

## ಲೆಕ್ಕಗಳು

(೧) ಕೆಳಗಿನ ಲೆಕ್ಕಗಳನ್ನು ಮೊದಲು ಬಾಯಿಂದ ಬಿಡಿಸಿರಿ. ಬಳಿಕ ಪಾಟಿಯ ಮೇಲೆ.

| | | | | | |
|---|---|---|---|---|---|
| ೧೬ + ೪ | ೧೫ + ೫ | ೧೪ + ೬ | ೧೩ + ೭ | ೧೨ + ೮ | ೧೧ + ೯ |
| ೨೬ + ೪ | ೨೫ + ೫ | ೨೪ + ೬ | ೨೩ + ೭ | ೨೨ + ೮ | ೨೧ + ೯ |
| ೩೬ + ೪ | ೩೫ + ೫ | ೩೪ + ೬ | ೩೩ + ೭ | ೩೨ + ೮ | ೩೧ + ೯ |
| ೪೬ + ೪ | ೪೫ + ೫ | ೪೪ + ೬ | ೪೩ + ೭ | ೪೨ + ೮ | ೪೧ + ೯ |
| ೫೬ + ೪ | ೫೫ + ೫ | ೫೪ + ೬ | ೫೩ + ೭ | ೫೨ + ೮ | ೫೧ + ೯ |
| ೬೬ + ೪ | ೬೫ + ೫ | ೬೪ + [illegible] | ೬೩ + ೭ | ೬೨ + ೮ | ೬೧ + ೯ |
| ೭೬ + ೪ | ೭೫ + ೫ | ೭೪ + ೬ | ೭೩ + ೭ | ೭೨ + ೮ | ೭೧ + ೯ |
| ೮೬ + ೪ | ೮೫ + ೫ | ೮೪ + ೬ | ೮೩ + ೭ | ೮೨ + ೮ | ೮೧ + ೯ |
| ೯೬ + ೪ | ೯೫ + ೫ | ೯೪ + ೬ | ೯೩ + ೭ | ೯೨ + ೮ | ೯೧ + ೯ |

(೨) ಒಂದು ಬುಟ್ಟಿಯಲ್ಲಿ ೨೬ ಪೇರಲಗಳಿದ್ದು ಅದರಲ್ಲಿ ಮತ್ತೆ ೪ ಪೇರಲಗಳನ್ನು ಹಾಕಿದರೆ ಒಟ್ಟಿಗೆ ಎಷ್ಟಾದವು?

(೩) ತಮ್ಮನ ವಯಸ್ಸು ೨೪ ವರುಷ ಅದೆ: ಅಣ್ಣನ ವಯಸ್ಸು ಇದಕ್ಕಿಂತ ೬ ವರುಷ ಹೆಚ್ಚಿಗಿದ್ದರೆ ಅಣ್ಣನ ವಯಸ್ಸೆಷ್ಟು?

(೪) ೪೫ ರೂ. ಕೊಟ್ಟು ಚೀಲ ಗೋದಿ ಕೊಂಡ ಬಳಿಕ ನಮ್ಮಲ್ಲಿ ೫ ರೂ. ಉಳಿದರೆ ಮೊದಲು ನಮ್ಮಲ್ಲಿದ್ದ ರೂಪಾಯಿಗಳೆಷ್ಟು?

(೫) ೩೭ ಸುತ್ತು ನೂಲು ಸುತ್ತಿದ ಬಳಿಕ ೩ ಸುತ್ತಿನಷ್ಟು ನೂಲು ಹರಿದು ಕೆಟ್ಟುಹೋಯಿತು. ಆದರೆ ನೂತ ನೂಲಿನ ಸುತ್ತುಗಳೆಷ್ಟು?

| | | | |
|---|---|---|---|
| (೬) ೩೫ ಬೀಜ | (೭) ೫೪ ಲಿಂಬೆ | (೮) ೭೧ ಗಿಡ | (೯) ೮೩ ಜತ್ತಿಗೆ |
| + ೩ ಬೀಜ | + ೩ ಲಿಂಬೆ | + ೬ ಗಿಡ | + ೨ ಜತ್ತಿಗೆ |
| + ೨ ಬೀಜ | + ೩ ಲಿಂಬೆ | + ೩ ಗಿಡ | + ೫ ಜತ್ತಿಗೆ |

(೧೦) [ಅ] ಗೋಲಿ: ೧೭+೨+೧

[ಬ] ಚೆಂಡು: ೪೩+೩+೪

(೧೧) ೨೫+ ೨ + ೩; ೩೩+೫+೩.

(೧೨) ೪೨+೩+೫; ೬೩+೬+೧; ೭೪+೪+೨

(೧೩) ೫೨ ಅಕ್ಕಡಗಳನ್ನು ಮಾರಿದರೂ ೮ ಅಕ್ಕಡಗಳು ಉಳಿದವು. ಆದರೆ ಮೊದಲು ನಮ್ಮ ಅಂಗಡಿಯಲ್ಲಿದ್ದ ಅಕ್ಕಡಗಳೆಷ್ಟು?

(೧೪) ೧೦ ರಲ್ಲಿ ೫ ಕೂಡಿಸಿದರೆ ೧೫; ೧೫ರಲ್ಲಿ ೫ ಕೂಡಿಸಿದರೆ ೨೦. ಹೀಗೆ ೪೦ ಬರುವ ವರೆಗೆ ಎಣಿಸಿರಿ.

(೧೫) ೩೨ ರಲ್ಲಿ ೪ ಕೂಡಿಸಿದರೆ ೩೬; ೩೬ ರಲ್ಲಿ ೪ ಕೂಡಿಸಿದರೆ ೪೦. ಹೀಗೆ ೬೦ ಬರುವ ವರೆಗೆ ಎಣಿಸಿರಿ.

[೪]

ವಿಶಿಷ್ಟ ಉದಾ: ನಮ್ಮ ಶಾಲೆಯಲ್ಲಿ ೫೮ ಲಪೇಟಿಗಳಿದ್ದವು. ಸರಕಾರದಿಂದ ಮತ್ತೆ ೨೪ ಲಪೇಟಿ ಬಂದವು. ಈಗ ನಮ್ಮ ಶಾಲೆಯಲ್ಲಿದ್ದ ಒಟ್ಟು ಲಪೇಟಿಗಳೆಷ್ಟು ?

೫೮ ಲಪೇಟಿಗಳಲ್ಲಿ ೨೪ ಲಪೇಟಿಗಳನ್ನು ಕೂಡಿಸತಕ್ಕದ್ದಿದೆ. ಆದ್ದರಿಂದ ಇದು ಬೇರೀಜಿನ ಲೆಕ್ಕ.

ಬರೆಹ :

| | ಹ. | ಬಿ. |
|---|---|---|
| | ೫ | ೮ ಲಪೇಟಿ |
| + | ೨ | ೪ ಲಪೇಟಿ |
| | ೧ | |
| | ೮ | ೨ ಲಪೇಟಿ |

ಓಮವಹ : ಬಿಡಿಕಾಳ ಬೇರೀಜು— ೪ ರಲ್ಲಿ ೮ ಕೂಡಿದರೆ ೧೨. ೧೨ ಕ್ಕೆ ೨. ಕೈಲಿ ಹತ್ತರ ಗಂಟು ೧. ಹತ್ತರ ಗಂ. ಬೇರೀಜು— ೧ ರಲ್ಲಿ ೨ ಕೂಡಿದರೆ ೩. ೩ ರಲ್ಲಿ ೫ ಕೂಡಿದರೆ ೮. ∴ ೮ ಕ್ಕೆ ೮.

**ಲೆಕ್ಕಗಳು**

[ ಮೊದಲು ಬಾಯಿಂದ ಬಿಡಿಸಿರಿ. ಆನಂತರ ಪಾಟಿಯ ಮೇಲೆ ]

(೧) ಒಂದು ಸಾಲಿನಲ್ಲಿ ೩೭ ಅಗಿಗಳೂ ಇನ್ನೊಂದರಲ್ಲಿ ೨೩ ಅಗಿಗಳೂ ಇದ್ದರೆ ಎರಡೂ ಸಾಲುಗಳಲ್ಲಿ ಇದ್ದ ಒಟ್ಟು ಅಗಿಗಳೆಷ್ಟು?

(೨) ಒಂದು ವರ್ಗದಲ್ಲಿ ೩೫ ಹುಡುಗರೂ ಇನ್ನೊಂದರಲ್ಲಿ ೨೬ ಹುಡುಗರೂ ಇದ್ದರೆ ಎರಡೂ ವರ್ಗಗಳಲ್ಲಿ ಕೂಡಿ ಹುಡುಗರೆಷ್ಟು ?

(೩) ೧೮ ರೂ. ಬೆಲ್ಲ, ೨೭ ರೂ. ಸಕ್ಕರೆ ಕೊಂಡರೆ ಅಂಗಡಿಕಾರನಿಗೆ ಕೊಡಬೇಕಾದ ಒಟ್ಟು ರೂಪಾಯಿಗಳೆಷ್ಟು ?

(೪) ೧೨ ಸೇರು ತೂಕವುಳ್ಳ ಪೆಟ್ಟಿಗೆಯಲ್ಲಿ ೬೮ ಸೇರು ತೂಕದ ಪುಸ್ತಕಗಳನ್ನು ತುಂಬಿದರೆ ಆ ಪೆಟ್ಟಿಗೆಯ ತೂಕವೆಷ್ಟಾಗುವದು ?

**(೫)** ಗೋವಿಂದನಿಗೆ ೪ ಕಾಗದ, ಗೋಪಾಲನಿಗೆ ೧೨ ಕಾಗದ, ಶಿವಪುತ್ರನಿಗೆ ೧೪ ಕಾಗದ ಕೊಟ್ಟಿದೆ. ಮೂವರಿಗೂ ಕೂಡಿ ಕೊಟ್ಟ ಕಾಗದಗಳೆಷ್ಟು ?

(೬) ಪ್ರತಿಯೊಂದರ ಉದ್ದ ೨೩ ಫೂಟು ಇದ್ದಂಥ ೨ ಗಳ ಗಳಿವೆ. ಮತ್ತು ೪ ಫೂಟು ಉದ್ದವಿದ್ದ ಇನ್ನೊಂದು ತುಂಡಿದೆ. ಮೂರೂ ಗಳಗಳ ಒಟ್ಟು ಉದ್ದಳತೆ ಎಷ್ಟಿರಬೇಕು?

(೭) ಒಂದು ಹಗೆಯಲ್ಲಿ ೧೭ ಹೇರು ಜೋಳವಿದೆ. ಇನ್ನೊಂದರಲ್ಲಿ ಇದಕ್ಕಿಂತ ೬ ಹೇರು ಹೆಚ್ಚಿಗಿದ್ದರೆ ೨ನೇ ಹಗೆಯಲ್ಲಿದ್ದ ಜೋಳವೆಷ್ಟು ?

(೮) ೧೨ ಇಂ. ಉದ್ದ ೮ ಇಂ. ಅಗಲವಿದ್ದ ಪಾಟಿಗೆ ಕಟ್ಟು ಕೂಡಿಸಲು ಕಟ್ಟಿಗೆಯ ಪಟ್ಟಿ ಎಷ್ಟು ಉದ್ದ ಬೇಕಾಗುವದು ?

(೯) ಗೋಪಾಲನಲ್ಲಿ ೧೦ ರೂ. ಗಳಿವೆ. ಭೀಮನಲ್ಲಿ ಅವನಿಗಿಂತ ೫ ರೂ. ಹೆಚ್ಚಿಗಿದ್ದರೆ ಇಬ್ಬರಲ್ಲಿ ಕೂಡಿ ಇದ್ದ ರೂಪಾಯಿಗಳೆಷ್ಟು ?

(೧೦) ಪುಸ್ತಕ: ೫೫+೩೨; ಗೋಡಂಬಿ: ೬೧+೨೮

# ಸಂಖ್ಯೆಗಳ ಓದು, ಬರೆಹ.

## [ ಒಂದನೆಯ ವಿಭಾಗ ]

೯ ಬಿಡಿಕಾಳುಗಳಲ್ಲಿ ೧ ಬಿಡಿಕಾಳು ಕೂಡಿಸಿದರೆ ೧೦ ಬಿ. ಆಗುವವು. ಈ ೧೦ ಬಿಡಿಕಾಳು ಕೂಡಿಸಿ ಗಂಟು ಕಟ್ಟಿದರೆ ೧ ಹತ್ತರ ಗಂಟು ಆಗುವದು. ಮತ್ತು ಬಿಡಿಕಾಳು ಏನೂ ಉಳಿಯುವದಿಲ್ಲ. ಆದ್ದರಿಂದ ಬಿಡಿಕಾಳ ಜಾಗೆಯಲ್ಲಿ ೦ ಬರೆದು ಹತ್ತರ ಗಂಟಿನ ಜಾಗೆಯಲ್ಲಿ ೧ ಬರೆಯುತ್ತಾರೆ. ಹತ್ತರ ಗಂಟಿನ ಜಾಗೆಯು ಬಿಡಿಕಾಳ ಜಾಗೆಯಿಂದ ಎಡಕ್ಕಿರುತ್ತದೆ.

ಹತ್ತರ ಗಂಟಿನ ಹತ್ತು ಗಂಟುಗಳನ್ನು ಕೂಡಿಸಿ ಕಟ್ಟಿದರೆ ೧ ನೂರರ ಗಂಟು ಆಗುತ್ತದೆ. ಹೀಗೆ ನೂರರ ಗಂಟು ಕಟ್ಟಿದ ಮೇಲೆ ಹತ್ತರ ಗಂಟು, ಬಿಡಿಕಾಳು ಏನೂ ಉಳಿಯಲಾರವು. ಆದ್ದರಿಂದ ಬಿಡಿಕಾಳು ಮತ್ತು ಹತ್ತರ ಗಂಟುಗಳ ಜಾಗೆಗಳಲ್ಲಿ ೦ ಬರೆಯುತ್ತಾರೆ. ಹತ್ತರ ಗಂಟಿನ ಎಡಬದಿಗೆ ನೂರರ ಗಂಟಿನ

ಜಾಗೆಯಿದ್ದು ಅಲ್ಲಿ ೧ ಬರೆಯುತ್ತಾರೆ. ನೂರರ ಗಂಟಿನ ಜಾಗೆ ಮೂರನೆಯದಿದೆ. ಜಾಗೆ ಎಂಬುದಕ್ಕೆ "ಸ್ಥಾನ" ಎಂದೂ ಕರೆಯುತ್ತಾರೆ.

| | | |
|---|---|---|
| ೧ ನೂರರ ಗಂಟು | = | ೧೦೦ ಬಿಡಿಕಾಳು |
| ೨ ನೂರರ ಗಂಟುಗಳು | = | ೨೦೦ ಬಿಡಿಕಾಳು |
| ೪ ನೂರರ ಗಂಟುಗಳು | = | ೪೦೦ ಬಿಡಿಕಾಳು |
| ೬ ನೂರರ ಗಂಟುಗಳು | = | ೬೦೦ ಬಿಡಿಕಾಳು |
| ೯ ನೂರರ ಗಂಟುಗಳು | = | ೯೦೦ ಬಿಡಿಕಾಳು |

**ವಿಶಿಷ್ಟ ಉದಾ:** ೭೬೫ ದ್ರಾಕ್ಷೆಗಳು. ಇವರಲ್ಲಿ ೭ ನೂರರ ಗಂಟುಗಳು, ೬ ಹತ್ತರ ಗಂಟುಗಳು, ೫ ಬಿಡಿಕಾಳು ಇರುತ್ತವೆ.

| ಇಲ್ಲಿ ನಿರೀಕ್ಷಿಸಿರಿ— | ನೂ. | ಹ. | ಬಿ. |
|---|---|---|---|
| | ೭ | ೬ | ೫ |

ಬಿಡಿಕಾಳ ಸ್ಥಾನ ನಮ್ಮ ಬಲಬದಿಗೆ ಇದೆ. ಹತ್ತರ ಗಂಟಿನ ಸ್ಥಾನ ಬಲಗಡೆಯಿಂದ ಎರಡನೆಯದಿದೆ. ಅದರಂತೆ ನೂರರ ಗಂಟಿನ ಸ್ಥಾನ ಬಲಗಡೆಯಿಂದ ಮೂರನೆಯದಾಗಿದೆ. ಮೇಲಿನ ಸಂಖ್ಯೆಯನ್ನು "**ಏಳುನೂರಾ ಅರವತ್ತೈದು**" ಎಂದು ಓದುತ್ತಾರೆ.

**ಲೆಕ್ಕಗಳು**

ಕೆಳಗಿನ ಸಂಖ್ಯೆಗಳನ್ನು ಓದಿರಿ.

(೧) ೪೦೦ ಗುಂಡುಗಳು
(೨) ೩೫೧ ತಕಲಿಗಳು
(೩) ೨೬೦ ಕುರಿಗಳು
(೪) ೫೮೨ ಹತ್ತಿಯ ಕಾಳುಗಳು
(೫) ೮೩೫ ರೂಪಾಯಿಗಳು
(೬) ೪೨೯ ಮನೆಗಳು
(೭) ೬೬೭ ಕಾಗದಗಳು
(೮) ೯೭೮ ಕಂಬಳಿಗಳು

ಕೆಳಗಿನ ಸಂಖ್ಯೆಗಳನ್ನು ಅಂಕಿಗಳಿಂದ ಬರೆಯಿರಿ.

(೯) ಎರಡುನೂರು ಆಕಳುಗಳು (೧೦) ಮೂರುನೂರಾ

ಮೂವತ್ತೆರಡ ಗಾದೆಗಳು (೧೧) ನಾಲ್ಕುನೂರಾ ಎರಡು ಎಮ್ಮೆಗಳು (೧೨) ಏಳುನೂರಾ ಐವತ್ತಾಲ್ಕು ಧೋತರಗಳು (೧೩) ಆರುನೂರಾ ಎಪ್ಪತ್ತೈದು ಹಣ್ಣುಗಳು (೧೪) ಐದುನೂರಾ ಎಂಭತ್ತೊಂದು ಝುಗಗಳು (೧೫) ಎಂಟುನೂರಾ ನಾಲ್ವತ್ತೊಂದು ಕನ್ನಡಿಗಳು (೧೬) ಒಂಭತ್ತುನೂರಾ ಎಂಟು ಕದರುಗಳು.

ಬಿಡಿ ರೂಪಾಯಿಗಳೆಷ್ಟೆಂಬುದನ್ನು ಹೇಳಿರಿ.

(೧೭) ನೂರರ ೫ ನೋಟುಗಳು

(೧೮) ನೂರರ ೩ ನೋಟುಗಳು ಮತ್ತು ಹತ್ತರ ೪ ನೋಟುಗಳು.

(೧೯) ನೂರರ ೪ ನೋಟುಗಳು ಮತ್ತು ಹತ್ತರ ೫ ನೋಟುಗಳು ಮತ್ತು ೬ ಬಿಡಿ ರೂಪಾಯಿಗಳು.

[೫]

**ವಿಶಿಷ್ಟ ಉದಾ:** ಬಾಳಪ್ಪ ರೈತನು ಒಂದು ಎತ್ತನ್ನು ೩೫೧ ರೂ. ಗಳಿಗೆ, ಒಂದು ಎಮ್ಮೆಯನ್ನು ೨೪೮ ರೂ. ಗಳಿಗೆ, ೧ ಆಕಳನ್ನು ೧೨೪ ರೂ. ಗಳಿಗೆ ಮಾರಿದನು. ಮಾರಿದ ದನಗಳಿಂದ ಆತನಿಗೆ ದೊರೆತ ಒಟ್ಟು ಹಣವೆಷ್ಟು ?

ಎತ್ತು, ಎಮ್ಮೆ, ಆಕಳುಗಳ ಬೆಲೆಗಳನ್ನು ಒಟ್ಟುಗೂಡಿಸ ಬೇಕಾಗಿದೆ. ಆದ್ದರಿಂದ ಇದು ಬೇರೀಜಿನ ಲೆಕ್ಕ.

**ಬರೆಹ:**

| | ನೂ. | ಹ. | ಬಿ. | |
|---|---|---|---|---|
| | ೩ | ೫ | ೧ | ರೂ. |
| + | ೨ | ೪ | ೮ | ರೂ |
| + | ೧ | ೨ | ೪ | ರೂ. |
| | ೧ | ೧ | | |
| | ೭ | ೨ | ೩ | ರೂ. |

**ಓದುವದು:** ಬಿಡಿಕಾಳ ಬೇರೀಜು – ೪ ಮತ್ತು ೮ ಕೂಡಿದರೆ ೧೨. ೧೨ ಮತ್ತು ೧ ಕೂಡಿದರೆ ೧೩. ∴ ೧೩ಕ್ಕೆ ೩, ಕೈ ೧ ಹ. ಗಂ. ಹತ್ತರ ಗಂಟುಗಳ ಬೇರೀಜು—೧ ಮತ್ತು ೨ ಕೂಡಿದರೆ ೩. ೩ ಮತ್ತು ೪ ಕೂಡಿದರೆ ೭. ೭ ಮತ್ತು ೫ ಕೂಡಿದರೆ ೧೨. ೧೨ಕ್ಕೆ ೨, ಕೈಲೆ ನೂರರ ಗಂಟು ೧.

ನೂರರ ಗಂಟುಗಳ ಬೇರೀಜು— ೧ ಮತ್ತು ೧ ಕೂಡಿದರೆ ೨. ೨ ರಲ್ಲಿ ೨ ಕೂಡಿದರೆ ೪. ೪ ರಲ್ಲಿ ೩ ಕೂಡಿದರೆ ೭. ∴೭ ಕ್ಕೆ ೭.

**ಲೆಕ್ಕಗಳು**

(೧) ನೋಟುಗಳ ಮೂರು ಸುರುಳಿಗಳಿದ್ದು ಪ್ರತಿಯೊಂದರಲ್ಲಿ ಕ್ರಮವಾಗಿ ೧೨೨ ರೂ., ೨೪೫ ರೂ., ೨೮೭ ರೂ. ಅವೆ. ಆ ಎಲ್ಲ ಸುರುಳಿಗಳ ಒಟ್ಟು ಹಣವೆಷ್ಟು ?

(೨) ನಮ್ಮಲ್ಲಿಯ ಧಾನ್ಯವನ್ನು ಮಾರಲಾಗಿ ಗೋದಿಯಿಂದ ೩೪೮ ರೂ., ಜೋಳದಿಂದ ೪೧೨ ರೂ., ನವಣೆಯಿಂದ ೯೭ ರೂ. ದೊರೆತವು. ಆದರೆ ನಮಗೆ ದೊರೆತ ಒಟ್ಟು ಹಣವೆಷ್ಟು?

(೩) ೧೩೮ ಕುಡುಗೋಲು
\+ ೨೨೭ ಕುಡುಗೋಲು
\+ ೩೪೫ ಕುಡುಗೋಲು

(೪) ೧೨೮ ಎತ್ತುಗಳು
\+ ೩೨೬ ಎತ್ತುಗಳು
\+ ೨೩೯ ಎತ್ತುಗಳು

(೫) ೧೦೫ ಪಾಟಿಗಳು
\+ ೨೫೮ ಪಾಟಿಗಳು
\+ ೩೭೧ ಪಾಟಿಗಳು

(೬) ೩೫೬ ಕಂದೀಲುಗಳು
\+ ೪೧೧ ಕಂದೀಲುಗಳು
\+ ೧೦೩ ಕಂದೀಲುಗಳು

(೭) ೬೭೫ ಹಾರಿಗಳು
\+ ೭ ಹಾರಿಗಳು
\+ ೧೪೮ ಹಾರಿಗಳು

(೮) ೫೮೧ ಅಂಗಿಗಳು
\+ ೧೭೮ ಅಂಗಿಗಳು
\+ ೯೩ ಅಂಗಿಗಳು

(೯) ಒಂದು ಚೀಲದಲ್ಲಿ ೫೯೮ ರೂ. ಗಳಿವೆ. ಇನ್ನೊಂದರಲ್ಲಿ ಅದಕ್ಕಿಂತ ೧೨೫ ರೂ. ಹೆಚ್ಚಿಗಿದ್ದರೆ ಎರಡನೆಯ ಚೀಲದಲ್ಲಿದ್ದ ರೂಪಾಯಿಗಳೆಷ್ಟು ?

(೧೦) ೩೦೫ ಈ ಸಂಖ್ಯೆಯನ್ನು ಮತ್ತು ಅದರ ಮುಂದಿನ ಎರಡು ಸಂಖ್ಯೆಗಳನ್ನು ತೆಗೆದುಕೊಂಡು ಬೇರೀಜು ಮಾಡಿದರೆ ಎಷ್ಟಾಗುತ್ತದೆ ?

೧೧) ಆಡುಗಳು: ೨೨೫+೯೨+೧೯೮=?

(೧೨) ಕಸಬರಿಗೆಗಳು: ೧೭೫+೨೦೨+೪೨೮=?

(೧೩) ಚೀಲಗಳು: ನಾಲ್ಕುನೂರಾ ಎಂಟು + ಅರವತ್ತೆಂಟು + ಎಪ್ಪತ್ತು=?

(೧೪) ಒಬ್ಬ ಕಂಚುಗಾರನು ೩೪೪ ರೂ. ಬೆಲೆಯ ಕೊಡಗಳನ್ನೂ ಅಷ್ಟೇ ಬೆಲೆಯ ಹಂಡೆಗಳನ್ನೂ ಮತ್ತು ೧೧೮ ರೂ. ಬೆಲೆಯ ತಂಬಿಗೆಗಳನ್ನೂ ಮಾರಿದನು. ಆತನಿಗೆ ದೊರೆತ ಒಟ್ಟು ಹಣವೆಷ್ಟು?

(೧೫) ಒಬ್ಬ ಉಪ್ಪಾರನು ೧೨೮ ಕಲ್ಲು ಒಡೆದನು. ಇನ್ನೊಬ್ಬನು ೧೧೨ ಕಲ್ಲು ಒಡೆದನು. ಮೂರನೆಯವನು ಇವರಿಬ್ಬರೂ ಕೂಡಿ ಒಡೆದಷ್ಟು ಒಡೆದನು. ಆದರೆ ಮೂವರೂ ಕೂಡಿ ಒಡೆದ ಕಲ್ಲುಗಳೆಷ್ಟು?

## ಸಂಖ್ಯೆಗಳ ಓದು, ಬರೆಹ

**[ಎರಡನೆಯ ವಿಭಾಗ]**

**ವಿಶಿಷ್ಟ ಉದಾ:** ೯೦೦+೧೦೦ ರೂ.=?

| | ನೂ. | ಹ. | ಬಿ. | |
|---|---|---|---|---|
| | ೯ | ೦ | ೦ | ರೂ. |
| + | ೧ | ೦ | ೦ | ರೂ. |
| | ೧೦ | ೦ | ೦ | ರೂ. |

ಒಟ್ಟಿಗೆ ಹತ್ತು ನೂರು ರೂಪಾಯಿಗಳಾದವು.

**ವಿವರಣೆ:** ೧೦ ಬಿಡಿಕಾಳುಗಳಿಂದ ೧ ಹತ್ತರ ಗಂಟಾಗುತ್ತದೆ. ೧೦ ಹತ್ತರ ಗಂಟುಗಳಿಂದ ೧ ನೂರರ ಗಂಟಾಗುತ್ತದೆ. ಅದೇ ರೀತಿ ೧೦ ನೂರರ ಗಂಟುಗಳಿಂದ ೧ **ಸಾವಿರ** ಗಂಟಾಗುತ್ತದೆ. ಸಾವಿರಕ್ಕೆ **ಸಹಸ್ರ** ಎಂದೂ ಅನ್ನುತ್ತಾರೆ. ೧ ಸಾವಿರವನ್ನು ಈ ರೀತಿ ಬರೆಯುತ್ತಾರೆ.

| ಸಾ. | ನೂ. | ಹ. | ಬಿ. | ಸಾವಿರದ ಸ್ಥಾನವು ಬಲಗಡೆಯಿಂದ ನಾಲ್ಕನೆಯದಾಗಿದೆ. |
|---|---|---|---|---|
| ೧ | ೦ | ೦ | ೦ | |

## ಲೆಕ್ಕಗಳು

ಕೆಳಗಿನ ಸಂಖ್ಯೆಗಳನ್ನು ಓದಿರಿ.

(೧) ೧೦೨೮ (೨) ೨೫೨೮ (೩) ೩೬೪೧ (೪) ೪೦೦೭
(೫) ೫೧೭೮ (೬) ೩೯೭೦ (೭) ೯೦೨೯ (೮) ೮೮೯೩

ಕೆಳಗಿನ ಸಂಖ್ಯೆಗಳನ್ನು ಬರೆಯಿರಿ.

(೯) ಮೂರುಸಾವಿರದ ಎರಡು ನೂರು (೧೦) ನಾಲ್ಕುಸಾವಿರದ ಎಪ್ಪತ್ತೆಂಟು (೧೧) ಐದುಸಾವಿರ ಆರುನೂರಾ ಆರು. (೧೨) ಒಂಭತ್ತು ಸಾವಿರದ ಇಪ್ಪತ್ತೇಳು. (೧೩) ಏಳು ಸಾವಿರದ ಎಪ್ಪತ್ತೈದು.

(೧೪) ಎಲ್ಲವೂ ಬಾಯಿಲೆಕ್ಕಗಳು.

[ಅ] ನೂರು ಎಲೆಗಳಿಗೆ ೧ ಆಣೆ ಬೆಲೆ. ಆದರೆ ೧೦೦೦ ಎಲೆಗೆ ಬೆಲೆ ಎಷ್ಟು ?

[ಬ] ೧೦೦ ಬಾಳೆಹಣ್ಣುಗಳ ಬೆಲೆ ೧ ರೂ. ಆದರೆ ೩೦೦೦ ಬಾಳೆಹಣ್ಣುಗಳಿಗೆ ಎಷ್ಟು ಹಣ ಕೊಡಬೇಕಾಗುವದು ?

[ಕ] ೧೦೦ ಬಾಳೆ ಎಲೆಗಳ ಒಂದು ಪೆಂಡೆಯನ್ನು ಕಟ್ಟುತ್ತೇವೆ. ೫೦೦೦ ಎಲೆಗಳಲ್ಲಿ ಎಷ್ಟು ಪೆಂಡೆಗಳಾಗುವವು ?

(೧೫) ಒಂದು ಊರಲ್ಲಿ "ಮೂರುಸಾವಿರ ಏಳುನೂರಾ ಮೂವತ್ತಾರು" ಗಂಡಸರೂ "ಮೂರುಸಾವಿರ ಆರುನೂರಾ ಐವತ್ತೆಂಟು" ಹೆಂಗಸರೂ ಇದ್ದಾರೆ. ಆದರೆ ಆ ಊರಲ್ಲಿದ್ದ ಜನರೆಷ್ಟು ?

(೧೬) ಒಂದು ಹಳ್ಳಿಯಿಂದ "ಎರಡು ಸಾವಿರ ಐದುನೂರು" ರೂಪಾಯಿ ತೆರಿಗೆ ವಸೂಲಾಯಿತು. ಇನ್ನೂ ಬರತಕ್ಕ ಹಣ

" ಒಂದು ಸಾವಿರ ಎಂಟುನೂರಾ ಇಪ್ಪತ್ನಾಲ್ಕು " ರೂಪಾಯಿ ಇದ್ದರೆ ಆ ಹಳ್ಳಿಯ ಒಟ್ಟು ತೆರಿಗೆ ಎಷ್ಟು ?

(೧೭) " ನಾಲ್ಕುಸಾವಿರ ಮೂವತ್ತೆರಡು " ರೂಪಾಯಿ, " ಎರಡು ಸಾವಿರ ಒಂದುನೂರಾ ಇಪ್ಪತ್ತೈದು " ರೂಪಾಯಿ, " ಎಂಭತ್ತೆಂಟು " ರೂಪಾಯಿಗಳನ್ನು ಒಂದೇ ಚೀಲದಲ್ಲಿ ತುಂಬಿದರೆ ಆ ಚೀಲದಲ್ಲಿಯ ಒಟ್ಟು ಹಣವೆಷ್ಟು ?

| (೧೮) | (೧೯) | (೨೦) |
|---|---|---|
| ೩೦೭೫ ಇಟ್ಟಿಗೆ | ೪೮೯ ಸೀಸು | ೨೩೩೩ ಪುಸ್ತಕ |
| + ೩೯೬ ಇಟ್ಟಿಗೆ | + ೨೦೪೫ ಸೀಸು | + ೪೫೫೫ ಪುಸ್ತಕ |
| + ೧೬೦೨ ಇಟ್ಟಿಗೆ | + ೩೯೬೦ ಸೀಸು | + ೧೨೨೨ ಪುಸ್ತಕ |

(೨೧) ೭೮೩೨ + ೭೨೩ + ೧೧೩೯ =?

(೨೨) ೪೨೨ + ೧೮೦೬ + ೮೧ + ೨೩೮೫ =?

(೨೩) ೪೯೯೯ + ೩೦೦೬ + ೭೮ + ೧೬೯ =?




(೨೪) ೧೮೦ ಮೊಳ ಉದ್ದ, ೧೧೬ ಮೊಳ ಅಗಲವಿದ್ದ ಗುಡಿಯ ಆವಾರದ ಗೋಡೆಯ ಸುತ್ತಲು ಪ್ರದಕ್ಷಿಣೆ ಹಾಕಲಿಕ್ಕೆ ಎಷ್ಟು ಮೊಳ ನಡೆಯಬೇಕಾಗುವದು ?

(೨೫) ಕುಂಬಾರ ರಾಮಪ್ಪನು ಸೋಮವಾರ ದಿನ "ಮೂರು ಸಾವಿರ ಐದುನೂರಾ ಹನ್ನೆರಡು " ಹಂಚುಗಳನ್ನೂ; ಮಂಗಳವಾರ ದಿನ " ಒಂದು ಸಾವಿರ ಎರಡುನೂರಾ ನಾಲ್ವತ್ತೆಂಟು " ಹಂಚುಗಳನ್ನೂ; ಬುಧವಾರ ದಿನ " ಮೂರುಸಾವಿರ ಏಳುನೂರಾ ಎಂಬತ್ತೈದು ಹಂಚುಗಳನ್ನೂ ಮಾರಿದನು. ಆತನು ಮೂರೂ ದಿನಗಳಲ್ಲಿ ಕೂಡಿ ಎಷ್ಟು ಹಂಚುಗಳನ್ನು ಮಾರಿದನು ?

# ಭಾರತೀಯ ನಾಣ್ಯಗಳು










ಮೇಲಿನ ಚಿತ್ರಗಳ ಹೆಸರುಗಳನ್ನು ಹೇಳುವಿರಾ? ರೂಪಾಯಿ, ಆಣೆ, ದುಡ್ಡು (ಬಿಲ್ಲಿ), ಪೈ. ಸರಿ, ಇವು ಭಾರತೀಯ ನಾಣ್ಯಗಳು. ಇವುಗಳ ಬಗ್ಗೆ ಹೆಚ್ಚಿನ ಸಂಗತಿಯನ್ನು ಕಲಿತುಕೊಳ್ಳತಕ್ಕದ್ದಿದೆ. ಈ ನಾಣ್ಯಗಳಲ್ಲಿ ಕೆಲವು ಬಿಳಿಯವು, ಕೆಲವು ಕೆಂಪು ಬಣ್ಣದವು ಇರುವವು.

ನೀವು ಕೂಲಿಯವನಿಗೆ ೪ ಆಣೆ ಕೊಡುವದಿದೆ ಎಂದು ತಿಳಿಯಿರಿ. ನಿಮ್ಮಲ್ಲಿ ಚಿಲ್ಲರೆ ಹಣವಿಲ್ಲ. ಈಗ ಒಂದು ರೂಪಾಯಿಯನ್ನು ಅಂಗಡಿಕಾರನಿಗೆ ಕೊಟ್ಟರೆ ಆತನು ನಿಮಗೆ ೧೬ ಆಣೆ ಕೊಡುತ್ತಾನೆ. ೧೬ ಆಣೆ ಅಂದರೇನೇ ೧ ರೂ. ಇದು ಹೆಚ್ಚಿನ ಬೆಲೆಯ ನಾಣ್ಯ. ∴ ೧೬ ಆ. = ೧ ರೂ.

ಅಂಗಡಿಯಲ್ಲಿ ೧ ಆಣೆ ಕೊಟ್ಟರೆ ಎಷ್ಟು ದುಡ್ಡುಗಳು ದೊರೆಯುವವು ? ೪ ದುಡ್ಡುಗಳು ದೊರೆಯುವವು. ∴ ೪ ದು. = ೧ ಆ.

ದುಡ್ಡಿಗಿಂತ ಚಿಕ್ಕದೂ ಕಡಿಮೆ ಬೆಲೆಯುಳ್ಳದ್ದೂ ಆದ ನಾಣ್ಯವೆಂದರೆ "ಪೈ." ಇಂದಿನ ಏರಿಕೆಯ ಬೆಲೆಗಳಿಂದಾಗಿ ವ್ಯವಹಾರದಲ್ಲಿ ಪೈಗಳ ಬಳಿಕೆ ಕಡಿಮೆಯಾಗಿದೆ. ೧ ದುಡ್ಡು ಕೊಟ್ಟರೆ ೩ ಪೈಗಳು ದೊರೆಯುವವು. ∴ ೩ ಪೈ = ೧ ದುಡ್ಡು.

**ನೆನಪಿಡಿರಿ:** ೩ ಪೈ = ೧ ದುಡ್ಡು
೪ ದುಡ್ಡುಗಳು = ೧ ಆಣೆ
೧೬ ಆಣೆಗಳು = ೧ ರೂಪಾಯಿ

ಇವುಗಳಲ್ಲದೆ ಇನ್ನೂ ಕೆಲವು ನಾಣ್ಯಗಳು ಬಳಕೆಯಲ್ಲಿವೆ.

೨ ದುಡ್ಡುಗಳ ನಾಣ್ಯಕ್ಕೆ "ಅರ್ಧಾಣೆ" ಅನ್ನುತ್ತಾರೆ.



೪ ಆಣೆ ನಾಣ್ಯ "ಪಾವಲಿ" ಅನ್ನುತ್ತಾರೆ.




೨ ಆಣೆ ನಾಣ್ಯಕ್ಕೆ "ಚವಲಿ" ಅನ್ನುತ್ತಾರೆ.



೮ ಆಣೆ ನಾಣ್ಯಕ್ಕೆ "ಅರ್ಧ ರೂಪಾಯಿ" ಅನ್ನುತ್ತಾರೆ.




**ನೆನಪಿಡಿರಿ :**

| | |
|---|---|
| ೧೨ ಪೈ = ೧ ಆಣೆ | ೨ ಅರ್ಧ ರೂ. = ೧ ರೂಪಾಯಿ |
| ೨ ಆಣೆ = ೧ ಚವಲಿ | ೧೯೨ ಪೈ = ೧ ರೂಪಾಯಿ |
| ೨ ಚವಲಿ = ೧ ಪಾವಲಿ | ೬೪ ದುಡ್ಡು = ೧ ರೂಪಾಯಿ |
| ೨ ಪಾವಲಿ = ೧ ಅರ್ಧ ರೂಪಾಯಿ | ೮ ಚವಲಿ = ೧ ರೂಪಾಯಿ |
| | ೪ ಪಾವಲಿ = ೧ ರೂಪಾಯಿ |

## ಲೆಕ್ಕಗಳು

........ಹೀಗೆ ಟಿಕ್ಕುಗಳಿದ್ದಲ್ಲಿ ಯೋಗ್ಯವಾದುದನ್ನು ತುಂಬಿರಿ.

(೧) ೧ ಆಣೆ = .... ದುಡ್ಡುಗಳು; ೧ ಚವಲಿ = .... ದುಡ್ಡುಗಳು.

(೨) ೬ ಪೈ = .....ದುಡ್ಡುಗಳು; ....ಪೈ = ೧ ಆಣೆ

(೩) ಒಂದು ಚವಲಿಗೆ .. ಪೈಗಳು ದೊರೆಯುವವು.

(೪) ಪಾವಲಿ ಕೊಟ್ಟರೆ ....ದುಡ್ಡುಗಳು ಇಲ್ಲವೆ.... ಆಣೆ ದೊರೆಯುವವು.

**(೫)** ೧ ಅರ್ಧ ರೂಪಾಯಿ ಕೊಟ್ಟರೆ ....ಚವಲಿ ದೊರೆಯುವವು.

(೭) ೧ ಚವಲಿ=....ಆಣೆ =.... ದುಡ್ಡುಗಳು= ...ಪೈಗಳು.

(೮) ೧ ಪಾವಲಿಗೆ ಎಷ್ಟು ಅರ್ಧ ಆಣೆ ನಾಣ್ಯಗಳು ದೊರೆಯುವವು ?

(೮) ಕೆಳಗಿನ ನಾಣ್ಯಗಳಿಗೆ ದುಡ್ಡುಗಳೆಷ್ಟು ?

೨ ಆ; ೩ ಆ; ೫ ಆ; ೫ ಆಣೆ.

(೯) ೩ ದು.=....ಪೈ; ೫ ದು.=....ಪೈ.

(೧೦) ೨ ರೂ.=....ಚವಲಿ; ೫ ರೂ. = .... ಪಾವಲಿ.

(೧೧) [ಅ] ೧೧ ದು.= ೨ ಆಣೆ ಮತ್ತು....ದುಡ್ಡು.

[ಬ] ೧೩ ದು.= ...ಆಣೆ ...ದುಡ್ಡು.

[ಕ] ೨೦ ದು.=....ಪಾವಲಿ....ಆಣೆ.

[ಡ] ೧೯ ಆಣೆ= ...ರೂ.... ಆಣೆ.

[ಇ] ೧೦ ಚವಲಿ=....ರೂ.....ಆಣೆ.

(೧೨) ೧ ದುಡ್ಡಿಗೆ ೨ ನೇರಿಲ ಹಣ್ಣು. ಆದರೆ ೧ ಚವಲಿಗೆಷ್ಟು ?

(೧೩) ೧ ಆಣೆಗೆ ೩ ಕಾಗದ. ಆದರೆ ೩ ಆಣೆಗಳಿಗೆಷ್ಟು?

(೧೪) ೧ ಪಾವಲಿಗೆ ಒಂದು ಪುಸ್ತಕ ಬರುವದು. ಆದರೆ ೨ ರೂ. ಕೊಟ್ಟರೆ ಅಂಥ ಎಷ್ಟು ಪ್ರತಿಗಳು ದೊರೆಯುವವು ?

(೧೫) ೨ ಆಣೆಗಳಿಗೆ ಒಂದರಂತೆ ೨ ರೂ. ಗಳಿಗೆ ಎಷ್ಟು ತೆಂಗು ದೊರೆಯುತ್ತವೆ ?

(೧೬) ೨ ಆಣೆಗಳಿಗೆ ೧ ಟಾಕು. ಆದರೆ ೧ ಅರ್ಧ ರೂಪಾಯಿಗೆ ಎಷ್ಟು ಟಾಕ ಗಳು ದೊರೆಯುತ್ತವೆ ?

(೧೭) [ಅ] ೨ ಪಾಕೀಟು ೧ ಕಾರ್ಡಿನ ಬೆಲೆ ಎಷ್ಟು ?

[ಬ] ೩ ಪಾಕೀಟು ೨ ಕಾರ್ಡಿನ ಬೆಲೆ ಎಷ್ಟಾಗುತ್ತದೆ ?

[ಕ] ೨ ಪಾಕೀಟು ೪ ಕಾರ್ಡುಗಳ ಬೆಲೆ ಎಷ್ಟು ?

[ಡ] ೧ ಆಣೆ ತಿಕೀಟು, ೪ ಪಾಕೀಟು, ೩ ಕಾರ್ಡುಗಳನ್ನು ತೆಗೆದುಕೊಂಡರೆ ಎಷ್ಟು ಹಣ ಕೊಡಬೇಕಾಗುತ್ತದೆ ?

# ಉದ್ದಗಲಗಳನ್ನು ಅಳೆಯುವದು.



ಮೇಲಿನ ಚಿತ್ರವನ್ನು ನೋಡಿರಿ. ಅಂಗಡಿಕಾರನು ಒಂದು ಕಬ್ಬಿಣ ಪಟ್ಟಿಯನ್ನು ತೆಗೆದುಕೊಂಡು ಅದರ ಸಹಾಯದಿಂದ ಅರಿವೆಯನ್ನು ಅಳೆಯುತ್ತಿರುವನು. ಆ ಪಟ್ಟಿಯಿಂದ ಒಂದು ಸಲ ಅಳೆಯಲಾಗಿ ಎಷ್ಟು ಉದ್ದ ಬಟ್ಟೆ ಬರುವದೋ ಅದಕ್ಕೆ "೧ **ವಾರ ಅರಿವೆ**" ಎಂದು ಅನ್ನುತ್ತಾರೆ. ನಿಮ್ಮ ಹತ್ತರ ಅಂಥ ಪಟ್ಟಿ ಅದೆಯೋ ? ಇಲ್ಲ. ನಿಮ್ಮಲ್ಲಿ "**ಫೂಟ ಪಟ್ಟಿ**" ಇದೆ. ಇಲ್ಲಿ ದಾರವಿದೆ. ಇದರಲ್ಲಿ ೩ ಫೂಟುಗಳಷ್ಟು ಅಳೆದು ಕತ್ತರಿಸಿರಿ. ಈ ತುಂಡಿಗೇ ೧ ವಾರ ದಾರವೆಂದು ಅನ್ನುತ್ತಾರೆ. ಅಂಗಡಿಕಾರನ ಪಟ್ಟಿಗೆ "ಗಜ ಕಟ್ಟಿಗೆ" ಅನ್ನುತ್ತಾರೆ.

**∴ ೩ ಫೂಟು ಉದ್ದವೆಂದರೆ ೧ ವಾರ.**

ನಿಮ್ಮ ವಾಚನಪುಸ್ತಕದ ಉದ್ದಳತೆಯನ್ನು ಅಳೆಯಿರಿ. ಫೂಟ ಪಟ್ಟಿಯಿಂದ ಅಳೆಯಲಿಕ್ಕೆ ಬರುವದಿಲ್ಲವೆ ? ಆ ಪುಸ್ತಕದ ಉದ್ದ ಫೂಟಿಗಿಂತ ಕಡಿಮೆಯದೆ. ಇನ್ನು ನಿಮ್ಮ ಫೂಟಪಟ್ಟಿಯ ಮೇಲೆ ಸರಿಯಾಗಿ ಭಾಗ ಮಾಡಿದ ೧೨ ಗುರುತುಗಳಿರುವವು. ಆ ಪ್ರತಿಯೊಂದು ಭಾಗಕ್ಕೆ "**ಇಂಚು**" ಅನ್ನುತ್ತಾರೆ. ಇಂಚಿನ ಅಳತೆಯಿಂದ ಫೂಟಿಗಿಂತಲೂ ಕಡಿಮೆ ಉದ್ದಳತೆಯನ್ನು ಅಳೆಯಲಿಕ್ಕೆ

ಬರುತ್ತದೆ. ಪ್ರತಿಯೊಂದು ಇಂಚಿನ ಅಳತೆಯ ಕೊನೆಯಲ್ಲಿ ಒಂದು ಅಂಕಿ ಇರುತ್ತದೆ. ನಿಮ್ಮ ಪಟ್ಟಿಯ ಮೇಲಿನ ಅಂಕಿಗಳೆಲ್ಲ ಇಂಗ್ಲೀಷಿನವು. ನಿಮಗೆ ತಿಳಿಯುವದಕ್ಕಾಗಿ ಕೆಳಗಡೆಗೆ ಕನ್ನಡ ಅಂಕಿಗಳನ್ನು ಬರೆದಿರುವೆ. ಅಂಕಿಗಳನ್ನು ಚೆನ್ನಾಗಿ ನೆನಪಿಡಿರಿ.

| | | | | | | | | | | | |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ |

∴ ೧೨ ಇಂಚು = ೧ ಫೂಟು.

ಇನ್ನು ಹಲವು ಸಾರೆ ಮೊಳದಿಂದಲೂ ಅಳೆಯುತ್ತಾರೆ. ಆದರೆ ಎಲ್ಲರ ಮೊಳಗಳೂ ಅಷ್ಟಷ್ಟೇ ಉದ್ದ ಇರಲಾರವು. ಅಂತೇ ಈಗ ಮೊಳದಿಂದ ಅಳೆಯುವ ಪದ್ಧತಿ ಕಡಿಮೆಯಾಗುತ್ತ ನಡೆದಿದೆ. ಆದರೂ ೧೮ ಇಂಚಿನ ಉದ್ದಳತೆಗೇ "ಮೊಳ" ವೆಂದು ಕರೆಯುತ್ತಾರೆ.

### ಲೆಕ್ಕಗಳು

(೧) ನಿಮ್ಮ ಗಣಿತದ ಉದ್ದಳತೆಯನ್ನು ಫೂಟಪಟ್ಟಿಯಿಂದ ಅಳೆಯಿರಿ.

(೨) ಕರೇ ಹಲಗೆಯ ಒಂದು ಬದಿಯು ಎಷ್ಟು ಉದ್ದವದೆ?

(೩) ನಿಮ್ಮ ಸಾಲೆಯ ಕೋಣೆಯ ಉದ್ದಳತೆ ಎಷ್ಟಿದೆ ?

(೪) ನಿಮ್ಮ ಪಾಟಿಯಲ್ಲಿ ೩ ಇಂ., ೪ ಇಂ., ೫ ಇಂ. ಉದ್ದಳತೆಯುಳ್ಳ ಬೇರೆ ಬೇರೆ ಗೆರೆಗಳನ್ನು ಎಳೆಯಿರಿ.

(೫) ನಿಮ್ಮ ವರ್ಗದ ಪೆಟ್ಟಿಗೆಯ ಉದ್ದ ಅಗಲಗಳನ್ನು ಅಳೆದು ಹೇಳಿರಿ. ಮತ್ತು ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ.

[ಅ] ಪೆಟ್ಟಿಗೆಯ ಮುಚ್ಚಳದ ಉದ್ದಳತೆಯು ಇಂಚುಗಳೆಷ್ಟು?

[ಬ] ಪೆಟ್ಟಿಗೆಯ ಅಷ್ಟಷ್ಟೇ ಉದ್ದಳತೆಯ ಅಂಚುಗಳು ಎದುರೆದುರು ಇರುವವೊ? ಇಲ್ಲವೆ ಹತ್ತಿರ ಹತ್ತಿರ ಇರುವವೊ?

(೬) ನಿಮಗೆ ಈಗ ಒಂದೊಂದು ಕಾಗದ ಕೊಟ್ಟಿದ್ದು (ಶಿಕ್ಷಕರು ಪೂರೈಸಬೇಕು.) ಅವುಗಳ ಉದ್ದಗಲಗಳನ್ನು ಅಳೆಯಿರಿ.

[ಅ] ಕಾಗದದ ಉದ್ದನೆಯ ಬದಿಗಳೆಷ್ಟು? ಒಂದರ ಅಳತೆ ಎಷ್ಟು?

[ಬ) ಕಾಗದದ ಅಗಲದ ಬದಿಗಳೆಷ್ಟು? ಒಂದರ ಅಳತೆ ಎಷ್ಟು?

**ವಿಶಿಷ್ಟ ಉದಾ:** O ಹೀಗೆ ಆಕಾರವುಳ್ಳ ಕಾಜಿನ ಬಳೆ ಇದೆ. ಇದರ ಅಂಚನ್ನು ಹೇಗೆ ಅಳೆಯುವಿರಿ?

ಫೂಟಪಟ್ಟಿಯಿಂದ ಅಳೆಯಲಿಕ್ಕೆ ಬರುವದೆ? ಇಲ್ಲ. ಆದರೆ ಸುತ್ತಲೂ ದಾರವನ್ನು ಸುತ್ತಿ ಅಳತೆ ನೋಡಿಕೊಂಡು ಬಿಚ್ಚಿರಿ. ಬಳಿಕ ಆ ದಾರವನ್ನು ಫೂಟಪಟ್ಟಿಯಿಂದ ಅಳೆಯಿರಿ. ಅಂದರೆ ಅದರ ಉದ್ದಳತೆ ತಿಳಿಯುವದು. ಇದೇ ರೀತಿ ಶಾಲೆಯ ಗಂಟೆ ಮೊದಲಾದ ದುಂಡನೆಯ ಬದಿಯುಳ್ಳ ಅಂಚನ್ನು ಅಳೆಯುತ್ತಾರೆ.



ಬದಿಯ ಚಿತ್ರಗಳನ್ನು ನೋಡಿರಿ. ಶಿಂಪಿಗನು ದೇಹದ ಅವಯುವಗಳ ಅಳತೆಯನ್ನು ತೆಗೆದುಕೊಳ್ಳುವಾಗ ಒಂದು ಉದ್ದನೆಯ ಪಟ್ಟಿಯನ್ನು ಉಪಯೋಗಿಸುತ್ತಾನೆ. ಅದಕ್ಕೆ "ಟೇಪು" ಎಂದು ಅನ್ನುತ್ತಾರೆ. ಇನ್ನು ಇಂಥ ಪ್ರಸಂಗದಲ್ಲಿ ಫೂಟಪಟ್ಟಿಯು ಉಪಯೋಗವಾಗಲಾರದು. ಶಿಂಪಿಗನು ಎದೆ, ಹೊಟ್ಟೆ, ತೋಳು, ಕುತ್ತಿಗೆ,



ತಲೆ ಇವುಗಳ ಅಳತೆಗಳನ್ನು ಟೇಪಿನಿಂದಲೇ ತೆಗೆದು ಕೊಳ್ಳುತ್ತಿರುವನು. ಬದಿಯ ಚಿತ್ರಗಳು ಕೆಲವು ಮಾದರಿ ಗಳು. ನೀವಾದರೂ ಅದ ರಂತೆ ಟೇಪಿನಿಂದ ಅಳತೆ ಯನ್ನು ತೆಗೆದುಕೊಳ್ಳಬಲ್ಲಿರಿ.



ಟೇಪಿನ ಉದ್ದಳತೆ " ೬೦ ಇಂಚು " ಇರುವದು.

**ಲೆಕ್ಕಗಳು**

(೧) ನಿಮ್ಮ ಎತ್ತರ ಎಷ್ಟು?
(೨) ನಿಮ್ಮ ಎದೆಯ ಸುತ್ತಳತೆ ಎಷ್ಟಿದೆ ?
(೩) ಈ ಮೇಜಿನ ಅಗಲಳತೆ ಎಷ್ಟು ?
(೪) ನಿಮ್ಮ ಕುತ್ತಿಗೆಯ ಸುತ್ತಳತೆ ಎಷ್ಟಿರುತ್ತದೆ ?
(೫) ನಿಮ್ಮ ತೋಳು ಎಷ್ಟು ಇಂಚು ಉದ್ದವದೆ ?
(೬) ನಿಮ್ಮ ಪಾದದ ಉದ್ದಳತೆ ಎಷ್ಟಿರಬೇಕು ?
(೭) ಈ ಕೋಣೆಯ ಉದ್ದಗಲಗಳ ಅಳತೆ ಎಷ್ಟೆಷ್ಟು ?

---

## ೨. ಕಳೆಯುವದು



[೧]

**ವಿಶಿಷ್ಟ ಉದಾ:** ಶ್ರೀನಿವಾಸನು ತನ್ನಲ್ಲಿದ್ದ ೮ ಪೇಪರ ಮಿಂಟುಗಳಲ್ಲಿ ೨ ಪೇ. ತಿಂದನು. ಈಗ ಅವನಲ್ಲಿ ಎಷ್ಟು ಉಳಿದವು?

ಒಂದೇ ಜಾತಿಯ ಎರಡು ಸಂಖ್ಯೆಗಳಿದ್ದು ಒಂದರಲ್ಲಿ ಇನ್ನೊಂದನ್ನು ಕಡಿಮೆ ಮಾಡುವದಕ್ಕೆ " ಕಳೆಯುವದು "

**ಎಂದು ಅನ್ನುತ್ತಾರೆ.** ಕಳೆದ ಬಳಿಕ ಉಳಿದವ್ವಕ್ಕೆ " **ಬಾಕಿ** " ಎಂದು ಅನ್ನುವರು. ಇಂಥ ಲೆಕ್ಕಗಳಿಗೆ "ವಜಾಬಾಕಿಯ ಲೆಕ್ಕ" ಗಳೆಂದೂ ಕರೆಯುವರು. ಕಳೆಯುವ ಲೆಕ್ಕಗಳನ್ನು ಕೆಳಗಿನಂತೆ ಬಿಡಿಸುವರು.

| | |
|---|---|
| (೧) ೮ ಪೇಪರಮಿಂಟುಗಳು<br>— ೨ ಪೇಪರಮಿಂಟುಗಳು<br>೬ ಪೇಪರಮಿಂಟುಗಳು | ೨ರಲ್ಲಿ ಎಷ್ಟು ಕೂಡಿದರೆ ೮? ೬. ∴ ೬ಕ್ಕೆ ೬ |

**ಇನ್ನೊಂದು ರೀತಿ:—**

(೨) ೮ ಪೇ.—೨ ಪೇ = ೬ ಪೇಪರಮಿಂಟುಗಳು. ಕಳೆಯತಕ್ಕ ಸಂಖ್ಯೆಯ ಹಿಂದೆ — ಹೀಗೆ ಗುರುತು ಮಾಡಿದ್ದು ಮೇಲಿನ ಲೆಕ್ಕಗಳಲ್ಲಿದೆ. ಆ ಗುರುತಿಗೆ " ಕಳೆಯುವ ಗುರುತು " ಇಲ್ಲವೆ "**ಉಣೆಚಿಹ್ನ**" ಎಂದು ಕರೆಯುತ್ತಾರೆ. ಉಣೆ ಇದರ ಅರ್ಥ ಕಡಿಮೆ ಮಾಡುವದು.

**ಲೆಕ್ಕಗಳು** (ಬಾ: ೧ರಿಂದ ೮)

| (೧) ರೂಪಾಯಿ | (೨) ಕುದುರೆಗಳು | (೩) ಪೇಲಲಗಳು | (೪) ಆಣೆಗಳು |
|---|---|---|---|
| ೪ | ೯ | ೮ | ೯ |
| — ೨ | — ೨ | — ೪ | — ೫ |

(೫) ೫ರಲ್ಲಿ ಎಷ್ಟು ಕೂಡಿದರೆ ೮ ಆಗುತ್ತದೆ ?
(೬) ೬ರಲ್ಲಿ ಎಷ್ಟು ಕೂಡಿದರೆ ೧೦ ಆಗುತ್ತದೆ ?
(೭) ೩ರಲ್ಲಿ ಎಷ್ಟು ಕೂಡಿದರೆ ೯ ಆಗುತ್ತದೆ ?
(೮) ೭ರಲ್ಲಿ ಎಷ್ಟು ಕೂಡಿದರೆ ೧೨ ಆಗುತ್ತದೆ ?
(೯) ೮ರಲ್ಲಿ ಎಷ್ಟು ಕೂಡಿದರೆ ೧೪ ಆಗುತ್ತದೆ ?
(೧೦) ೬ರಲ್ಲಿ ಎಷ್ಟು ಕೂಡಿದರೆ ೧೪ ಆಗುತ್ತದೆ ?
(೧೧) ೫ರಲ್ಲಿ ಎಷ್ಟು ಕೂಡಿದರೆ ೧೩ ಆಗುತ್ತದೆ ?
(೧೨) ೯ರಲ್ಲಿ ಎಷ್ಟು ಕೂಡಿದರೆ ೧೫ ಆಗುತ್ತದೆ ?

(೧೩) ೯ರಲ್ಲಿ ಎಷ್ಟು ಕೂಡಿದರೆ ೧೬ ಆಗುತ್ತದೆ?

(೧೪) ೮ರಲ್ಲಿ ಎಷ್ಟು ಕೂಡಿದರೆ ೧೭ ಆಗುತ್ತದೆ?

(೧೫) ೧೦ರಲ್ಲಿ ಎಷ್ಟು ಕೂಡಿದರೆ ೧೯ ಆಗುತ್ತದೆ?

[೨]

ವಿಶಿಷ್ಟ ಉದಾ: ೭೦ ತೆಂಗುಗಳಲ್ಲಿ ೩೦ ತೆಂಗುಗಳನ್ನು ಮಾರಿದರೆ ಉಳಿದ ತೆಂಗುಗಳೆಷ್ಟು?

೭೦ ತೆಂಗುಗಳಲ್ಲಿ ೩೦ ತೆಂಗುಗಳನ್ನು ಕಡಿಮೆ ಅಂದರೆ ಕಳೆಯತಕ್ಕದ್ದಿದೆ. ಆದ್ದರಿಂದ ಇದು ಕಳೆಯುವ ಲೆಕ್ಕ.

೭೦ ಅಂದರೆ ೭ ಹ. ಗಂ; ೩೦ ಅಂದರೆ ೩ ಹ. ಗಂ. ೭ ಹತ್ತರ ಗಂಟುಗಳಲ್ಲಿ ೩ ಹತ್ತರ ಗಂಟುಗಳನ್ನು ವಜಾ ಮಾಡಲಾಗಿ ಎಷ್ಟು ಉಳಿಯುತ್ತವೆಂಬುದನ್ನು ತೆಗೆಯುಬೇಕಾಗಿದೆ. ಮೂರರಲ್ಲಿ ಎಷ್ಟು ಕೂಡಿದರೆ ೭ ಆಗುತ್ತದೆ? ೪. ೪ ಹ ಗಂ. ಉಳಿದವು. ೪ ಹ. ಗಂ. ಅಂದರೆ ೪೦ ∴ ೪೦ ತೆಂಗು ಉತ್ತರ.

**ಬರೆಹ:**

| | ಹ. | ಬಿ. | |
|---|---|---|---|
| | ೭ | ೦ | |
| − | ೩ | ೦ | |
| | ೪ | ೦ | ತೆಂಗು |

**ಓದುವದು:**

ಬಿಡಿಕಾಳ ಕಳೆ:- ೦ಕ್ಕೆ ೦ ಹ. ಗಂ.

ಕಳೆ:- ೩ರಲ್ಲಿ ಎಷ್ಟು ಕೂಡಿದರೆ ೭? ೩ರಲ್ಲಿ ೪. ∴ ೪ಕ್ಕೆ ೪.

∴ ೪೦ ತೆಂಗು ಉತ್ತರ.

### ಲೆಕ್ಕಗಳು

[ಮೊದಲು ಬಾಯಿಂದ ಬಿಡಿಸಿದ ಬಳಿಕ ಪಾಟಿಯಲ್ಲಿ ಮಾಡಿರಿ.]

(೧) ೩೦ ಪೆಂಡಿ ಹುಲ್ಲಿನಲ್ಲಿ ೧೦ ಪೆಂಡಿ ಹುಲ್ಲನ್ನು ದನಗಳಿಗೆ ತಿನ್ನಿಸಿದರೆ ಉಳಿದ ಪೆಂಡಿಗಳೆಷ್ಟು?

(೨) ೫೦ ರೂಪಾಯಿಗಳಲ್ಲಿ ೨೦ ರೂ. ಗಳನ್ನು ವೆಚ್ಚ ಮಾಡಿದರೆ ಉಳಿದ ರೂಪಾಯಿಗಳೆಷ್ಟು?

(೩) ೬೦ ಕಾಗದಗಳಲ್ಲಿ ೪೦ ಕಾಗದಗಳ ಪುಸ್ತಕ ಕಟ್ಟಿದರೆ ಉಳಿದ ಕಾಗದಗಳೆಷ್ಟು ?

(೪) ೫೦ ಪೇರಲಗಳಲ್ಲಿ ೩೦ ಪೇರಲಗಳನ್ನು ಶಾಲೆಯ ಬಾಲಕರಲ್ಲಿ ಹಂಚಿದರೆ ಉಳಿದ ಪೇರಲಗಳೆಷ್ಟು ?

(೫) ೭೦ ರೂ. ಗಳಿಗೆ ೧ ಎಮ್ಮೆಯನ್ನು ಕೊಂಡು ಅದನ್ನು ೯೦ ರೂ. ಗಳಿಗೆ ಮಾರಿದರೆ ನಮಗೆ ಹೆಚ್ಚಿಗೆ ದೊರೆತ ಹಣವೆಷ್ಟು?

| (೬) ಮಾವುಗಳು | (೭) ಹಂಜಿಗಳು | (೮) ಹೂವುಗಳು |
|---|---|---|
| ೩೦ | ೫೦ | ೮೦ |
| —೧೦ | —೨೦ | —೪೦ |

(೯) ಗುಲಗಂಜಿಗಳು.

೭೦
—೫೦

(೧೦) ೧೨೦ ರೂ. ಗಳಿಗೆ ಕೊಂಡ ಗೋದಿಯನ್ನು ೧೪೦ ರೂ. ಗಳಿಗೆ ಮಾರಿದರೆ ನಮಗೆ ಮೊದಲಿನಕಿಂತ ಎಷ್ಟು ಹೆಚ್ಚಿಗೆ ರೂಪಾಯಿ ದೊರೆತವು ?

## [೩]

**ವಿಶಿಷ್ಟ ಉದಾ:** ನಮ್ಮ ವರ್ಗದಲ್ಲಿ ೪೬ ಹುಡುಗರಿದ್ದಾರೆ. ಈ ದಿನ ೫ ಹುಡುಗರು ಪರಊರಿಗೆ ಕಲಿಯಲಿಕ್ಕೆ ಹೋದರು. ಈಗ ನಮ್ಮ ವರ್ಗದಲ್ಲಿ ಉಳಿದ ಹುಡುಗರೆಷ್ಟು ?

**೪೬ ಅಂದರೆ ೪ ಹ. ಗಂ. ೬ ಬಿ. ಇವುಗಳಲ್ಲಿ**
**೫ ಬಿ. ಕಡಿಮೆಯಾಗಬೇಕಾಗಿದೆ.**

೫ರಲ್ಲಿ ಎಷ್ಟು ಕೂಡಿದರೆ ೬? ೫ರಲ್ಲಿ ೧. ೧ ಬಿಡಿಕಾಳು ಉಳಿಯಿತು. ಹತ್ತರ ಗಂಟುಗಳಲ್ಲಿ ವಜಾ ಮಾಡತಕ್ಕದ್ದಿರುವದಿಲ್ಲ.

೪. ಹ. ಗಂ. ಉಳಿದವು. ಒಟ್ಟಿಗೆ ೪ ಹ. ಗಂ. ಗಳು ೧ ಬಿಡಿಕಾಳು ಅಂದರೆ ೪೧ ಹುಡುಗರು ಉಳಿದರು.

**ಬರೆಹ:**

| ಹ. | ಬಿ. |
|---|---|
| ೪ | ೬ ಹು. |
| —೦ | ೫ ಹು. |
| ೪ | ೧ ಹು. |

**ಓದುವದು:**
ಬಿಡಿಕಾಳ ಕಳೆ:— ೫ರಲ್ಲಿ ಎಷ್ಟು ಕೂಡಿದರೆ ೬? ೧. ∴ ೧ಕ್ಕೆ ೧.
ಹ. ಗಂ. ಕಳೆ:— ೪ಕ್ಕೆ ೪.

∴ ೪೧ ಹು. ಉತ್ತರ.

## ಲೆಕ್ಕಗಳು

(ಮೊದಲು ಬಾಯಿಂದ ಆಮೇಲೆ ಪಾಟಿಯಲ್ಲಿ)

(೧) ೩೪ ರೂ. ಗಳಲ್ಲಿ ೩ ರೂ. ಬೆಣ್ಣೆ ಕೊಂಡರೆ ಉಳಿದ ರೂಪಾಯಿಗಳೆಷ್ಟು ?

(೨) ೪೭ ಹಂಜಿಗಳಲ್ಲಿ ೪ ಹಂಜಿ ನೂತರೆ ಉಳಿದ ಹಂಜಿಗಳೆಷ್ಟು ?

(೩) ೫೬ ಹಣ್ಣುಗಳಲ್ಲಿ ೪ ಹಣ್ಣು ಉಳಿದವು. ಆದರೆ ಮಾರಿದ ಹಣ್ಣುಗಳೆಷ್ಟು ?

(೪) ೪೮ ಸೇ. ಸವತಿಕಾಯಿಗಳಲ್ಲಿ ೫ ಸೇ. ಮಾರಿದರೆ ಉಳಿದ ಸವತಿಕಾಯಿಗಳ ತೂಕವೆಷ್ಟು ?

(೫) ೭೮ ಪುಟಗಳಿದ್ದ ಪುಸ್ತಕದಲ್ಲಿ ಓದತಕ್ಕ ೬ ಪುಟಗಳಿದ್ದರೆ ಓದಿದ ಪುಟಗಳೆಷ್ಟು ?

(೬) ೬೭ ರೂ. ಬೆಲೆಯ ಸೀರೆ ಕೊಂಡು ನಮ್ಮಲ್ಲಿದ್ದ ಎಲ್ಲ ಹಣ ಕೊಟ್ಟರೂ ಇನ್ನೂ ೫ ರೂ. ಕೊಡುವದು ಉಳಿಯಿತು. ಆದರೆ ನಾವು ಕೊಟ್ಟ ಹಣವೆಷ್ಟು ?

(೭) ನನಗೆ ೫೯ ಗುಣಗಳು ದೊರೆತಿದ್ದು, ವಿಮಲೆಗೆ ನನಗಿಂತ ೬ ಗುಣಗಳು ಕಡಿಮೆ ದೊರೆತಿವೆ. ಅಂದರೆ ವಿಮಲೆಗೆ ದೊರೆತ ಗುಣಗಳೆಷ್ಟು ?

(೮) ಗಾಂಧಿ ಸ್ಮಾರಕ ಫಂಡಿನ ೬೫ ಟಿಕೀಟುಗಳಲ್ಲಿ ೪ ಟಿಕೀಟು ಮಾರದೆ ಉಳಿದವು. ಆದರೆ ಮಾರಿದ ಟಿಕೀಟುಗಳೆಷ್ಟು ?

(೯) ೧೩ ಸಂತ್ರೆಯ ಹಣ್ಣುಗಳಲ್ಲಿ ೪ ತಿಂದೆವು. ೨ ಕೊಳೆತದ್ದರಿಂದ ಚೆಲ್ಲಿದೆವು. ಈಗ ಉಳಿದ ಹಣ್ಣುಗಳೆಷ್ಟು ?

(೧೦) ೨೭ ಪಾಟಿಗಳಲ್ಲಿ ೬ ಮಾರಿದೆವು. ೧ ಒಡೆದದ್ದರಿಂದ ಅದನ್ನು ಒಬ್ಬ ಬಡ ವಿದ್ಯಾರ್ಥಿಗೆ ಹಾಗೇ ಕೊಟ್ಟೆವು. ಈಗ ಅಂಗಡಿಯಲ್ಲಿ ಉಳಿದ ಪಾಟಿಗಳೆಷ್ಟು ?

(೧೧) ೬೫ ಕುದುರೆ (೧೨) ೭೯ ಮೈಲು (೧೩) ೮೮ ರೂ.
—೩ ಕುದುರೆ —೬ ಮೈಲು —೫ ರೂ.

(೧೪) ೯೯ ಗೇಣು
—೩ ಗೇಣು

(೧೫) ೫೮ ರೂ. —೭ ರೂ. = ....ರೂ ?

[೪]

**ವಿಶಿಷ್ಟ ಉದಾ:** [ಅ] ಶಿವಶಂಕರಪ್ಪನು ತನ್ನಲ್ಲಿದ್ದ ೪೮ ರೂ. ಗಳಲ್ಲಿ ೩೪ ರೂ. ಕೊಟ್ಟು ಒಂದು ಸೀರೆಯನ್ನು ಕೊಂಡನು. ಈಗ ಅವನಲ್ಲಿ ಉಳಿದ ಹಣವೆಷ್ಟು ?

ಇದು ಕಳೆಯುವ ಲೆಕ್ಕ (ಏಕೆ ?)

**ಬರೆಹ :**

| ಹ. | ಬಿ. |
|---|---|
| ೪ | ೮ ರೂ. |
| —೩ | ೪ ರೂ |
| ೧ | ೪ ರೂ. |

**ಓದುವದು:**

ಬಿಡಿಕಾಳ ಕಳಿ:- ೪ರಲ್ಲಿ ಎಷ್ಟು ಕೂಡಿದರೆ ೮? ೪. ∴ ೪ಕ್ಕೆ ೪. ಹ. ಗ. ಕಳಿ:- ೩ರಲ್ಲಿ ಎಷ್ಟು ಕೂಡಿದರೆ ೪? ೧. ∴ ೧ಕ್ಕೆ ೧.

**∴ ೧೪ ರೂ. ಉತ್ತರ.**

[ಬ] ಬೀರಪ್ಪನು ತನ್ನಲ್ಲಿದ್ದ ೪೬೮ ಕುರಿಗಳಲ್ಲಿ ೨೪೫ ಕುರಿಗಳನ್ನು ಮಾರಿದನು. ಈಗ ಅವನಲ್ಲಿ ಎಷ್ಟು ಕುರಿಗಳು ಉಳಿದಿರಬೇಕು ?

## ಇದು ಕಳೆಯುವ ಲೆಕ್ಕ.

ಬರೆಹ :

| ನೂ. | ಹ. | ಬಿ. | |
|---|---|---|---|
| ೪ | ೬ | ೮ | ಕುರಿ |
| — ೨ | ೪ | ೫ | ಕುರಿ |
| ೨ | ೨ | ೩ | ಕುರಿ |

ಓದುವದು : ಬಿ. ಕಳೆ: ೫ರಲ್ಲಿ ಎಷ್ಟು ಕೂಡಿದರೆ ೮? ೩. ∴ ೩ಕ್ಕೆ ೩.
ಹ. ಕಳೆ: ೪ರಲ್ಲಿ ಎಷ್ಟು ಕೂಡಿದರೆ ೬? ೨. ∴ ೨ಕ್ಕೆ ೨.

ನೂ. ವಜಾ: ೨ರಲ್ಲಿ ಎಷ್ಟು ಕೂಡಿದರೆ ೪? ೨. ∴ ೨ಕ್ಕೆ ೨.

**∴ ೨೨೩ ಕುರಿಗಳು ಉಳಿದವು. ಉತ್ತರ.**

### ಲೆಕ್ಕಗಳು

(೧) ೬೦೦ ಗಿಡಗಳಲ್ಲಿ ೪೨೦ ಗಿಡಗಳಿಗೆ ಕಾಯಿ ಬಿಟ್ಟಿವೆ. ಆದರೆ ಬಂಜೆಯುಳಿದ ಗಿಡಗಳೆಷ್ಟು ? (ಬಾ. ಲೆಕ್ಕ)

(೨) ಒಬ್ಬ ಮನುಷ್ಯನು ೭೪ ಮೈಲು ನಡೆದು ಬನಶಂಕರಿ ಜಾತ್ರೆಗೆ ಬರತಕ್ಕವನಿದ್ದನು. ಆತನು ಈಗ ೫೩ ಮೈಲು ನಡೆದಿದ್ದಾನೆ. ಇನ್ನೂ ಆತನು ನಡೆಯತಕ್ಕ ಮೈಲುಗಳೆಷ್ಟು ?

(೩) ೮೬ ಹೂವುಗಳಲ್ಲಿ ೬೨ ಹೂವುಗಳನ್ನು ತೆಗೆದುಕೊಂಡು ಮಾಲೆ ಕಟ್ಟಿತು. ಉಳಿದ ಹೂವುಗಳೆಷ್ಟು ?

(೪) ಕಪ್ಪುರದ ೯೮ ವಡಿಗಳಲ್ಲಿ ೨೬ ವಡಿಗಳನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿಟ್ಟೆವು. ಹೊರಗುಳಿದ ವಡಿಗಳೆಷ್ಟು ?

(೫) ೮೫ ಪುಸ್ತಕಗಳಲ್ಲಿ ೨೫ ಪುಸ್ತಕ ಮಾರಿದೆವು. ಉಳಿದ ಪುಸ್ತಕಗಳೆಷ್ಟು ?

(೬) ೧೬೬ ರೂ. ಪಗಾರದಲ್ಲಿ ೧೩೫ ರೂ.ಗಳ ವಸ್ತುಗಳನ್ನು ಮನೆಗೆ ತಂದಿತು. ಶಿಲುಕು ಉಳಿದ ರೂಪಾಯಿಗಳೆಷ್ಟು ?

(೭) ಒಂದು ಸಭೆಗೆ ೩೪೭ ಜನರು ಕೂಡಿದ್ದರು. ಸಭೆ ಮುಗಿಯುವಷ್ಟರಲ್ಲಿ ೩೧೨ ಜನರು ಹೊರಟುಹೋಗಿದ್ದರು. ಆದರೆ ಕೊನೆಗೆ ಉಳಿದ ಜನರೆಷ್ಟು ?

(೮) ಒಂದು ಊರಲ್ಲಿ ೮೬೪ ಮತದಾರರಿದ್ದರು. ಅವರಲ್ಲಿ

೬೩೧ ಜನರು ಮತ ಹಾಕಿದರು. ಮತ ಹಾಕದೆ ಉಳಿದುಕೊಂಡ ಜನರೆಷ್ಟು ?

(೯) ೧೯೯೨ ಹಂಚುಗಳಲ್ಲಿ ೧೮೭೧ ಹಂಚುಗಳನ್ನು ಮನೆಯ ಮೇಲೆ ಹೊಚ್ಚಿತು ಕೆಳಗುಳಿದ ಹಂಚುಗಳೆಷ್ಟು ?

(೧೦) ೪೨೪೯ ರೂ. ಗಳಲ್ಲಿ ಕೆಲವನ್ನು ಬ್ಯಾಂಕಿನಲ್ಲಿ ನೀವು ಇಟ್ಟಿತು. ನಮ್ಮಲ್ಲಿ ೧೧೨೭ ರೂ. ಉಳಿದಿದ್ದರೆ ಬಾಂಕಿನಲ್ಲಿಟ್ಟ ರೂಪಾಯಿಗಳೆಷ್ಟು ?

(೧೧) ೬೭೮೨ ಹತ್ತಿಯ ಗಂಟುಗಳಲ್ಲಿ ೫೬೪೨ ಹತ್ತಿಯ ಗಂಟುಗಳನ್ನು ಜಪಾನ ದೇಶಕ್ಕೆ ಕಳಿಸಿತು. ಈಗ ನಮ್ಮಲ್ಲಿ ಉಳಿದ ಗಂಟುಗಳೆಷ್ಟು ?

| (೧೨) ಯಂತ್ರಗಳು | (೧೩) ಸೂಜಿಗಳು | (೧೪) ಕತ್ತರಿಗಳು |
|---|---|---|
| ೫೭೬ | ೯೭೯ | ೬೩೭೧ |
| —೪೨೫ | —೫೩೮ | —೨೧೫೦ |

(೧೫) ಬಿರಡಿಗಳು.

೮೮೮೮
—೫೬೭೪

[೫]

**ವಿಶಿಷ್ಟ ಉದಾ:** ೩೫ ಹುಡುಗರಲ್ಲಿ ೧೬ ಹುಡುಗರು ಲೆಕ್ಕವನ್ನು ತಪ್ಪಿದರು ಆದರೆ ಎಷ್ಟು ಹುಡುಗರು ಪಾಸಾದರು ?

ಇದು ಕಳೆಯುವ ಲೆಕ್ಕ. (ಏಕೆ?)

೫ ಬಿಡಿಕಾಳುಗಳಲ್ಲಿ ೬ ಬಿಡಿಕಾಳುಗಳನ್ನು ಕಳೆಯಲಿಕ್ಕೆ ಬರುವದಿಲ್ಲ. ಇಂಥ ಪ್ರಸಂಗಗಳಲ್ಲಿ ಹತ್ತರ ಗಂಟುಗಳಲ್ಲಿ ಒಂದನ್ನು ತೆಗೆದುಕೊಳ್ಳುವರು. ಈಗ ೩ ಹತ್ತರ ಗಂಟುಗಳಲ್ಲಿ ಒಂದನ್ನು ತೆಗೆದುಕೊಂಡು ಬಿಡಿಸಿದರೆ ೧೦ ಬಿಡಿಕಾಳಾಗುವವು. ಮೊದಲಿನ ೫ ಬಿಡಿಕಾಳು ಕೂಡಿಸಿದರೆ ೧೫ ಬಿ. ಆಗುವವು. ೧೫ ಬಿ.—೬ ಬಿ.=

೯ ಪ. ಮತ್ತು ೨ ಹ.— ೧ ಪ. = ೧ ಹ. ಗಂ. ಆದ್ದರಿಂದ ೧೯ ಹು. ಉತ್ತರ.

| ಮೊದಲಿನ ಬರೆಹ: | | ಹ. ಗಂ. ಪೂರಿಸಿದ ಬರೆಹ: | |
|---|---|---|---|
| ಪ. | ಬಿ. | ಪ. | ಬಿ. |
| ೩ | ೫ ಹು. | ೨ | ೧೫ ಹು. |
| —೧ | ೬ ಹು. | —೧ | ೬ ಹು. |
| | | ೧ | ೯ ಹು. |

ಓದುವದು:

ಬಿ. ಕಳೆ: ೬ರಲ್ಲಿ ಎಷ್ಟು ಕೂಡಿದರೆ ೧೫? ೯. ∴ ೯ಕ್ಕೆ ೯.
ಹ. ಕಳೆ: ೧ರಲ್ಲಿ ಎಷ್ಟು ಕೂಡಿದರೆ ೨? ೧. ∴ ೧ಕ್ಕೆ ೧.
∴ ೧೯ ಹು. ಉತ್ತರ.

## ಲೆಕ್ಕಗಳು

(ಮೊದಲು ಬಾಯಿಂದ ಆಮೇಲೆ ಪಾಟಿಯಲ್ಲಿ)

(೧) ಒಬ್ಬ ಮನುಷ್ಯನು ೨೦ ಮೈ. ನಡೆಯುತಕ್ಕದ್ದಿತ್ತು. ಆತನು ೩ ಮೈಲು ನಡೆದಿದ್ದರೆ ಇನ್ನೂ ನಡೆಯುತಕ್ಕ ಮೈಲುಗಳೆಷ್ಟು?

(೨) ಎತ್ತು ಆಕಳುಗಳು ಕೂಡಿ ೩೦ ದನಗಳಿರುವವು. ಅವುಗಳಲ್ಲಿ ೬ ಎತ್ತುಗಳಿದ್ದರೆ ಆಕಳುಗಳೆಷ್ಟು?

(೩) ೫೦ ವಾರ ಅರಿವೆಯಲ್ಲಿ ೭ ವಾರ ಅರಿವೆಯನ್ನು ಮಾರಲಾಗಿ ಉಳಿದ ಅರಿವೆಯೆಷ್ಟು?

(೪) ೪೦ ಹಣ್ಣುಗಳಲ್ಲಿ ೮ ಹಣ್ಣು ಕೆಟ್ಟಿದ್ದರೆ ಕೆಡದೆ ಇದ್ದ ಹಣ್ಣುಗಳೆಷ್ಟು?

(೫) ೨೨ ಮಡಿಗಳನ್ನು ತಯಾರಿಸಬೇಕಾಗಿತ್ತು. ಈಗ ೪ ಮಡಿಗಳನ್ನು ತಯಾರಿಸಿದ್ದರೆ ತಯಾರಮಾಡಬೇಕಾದ ಮಡಿಗಳೆಷ್ಟು?

(೬) ಒಂದು ಪುಸ್ತಕದಲ್ಲಿ ೩೩ ಕವಿತೆಗಳಿವೆ. ಅವುಗಳಲ್ಲಿ ೫ ಕವಿತೆಗಳು ಓದದೆ ಉಳಿದವು. ಹಾಗಾದರೆ ಓದಿದ ಕವಿತೆಗಳೆಷ್ಟು?

(೭) ಒಂದು ಬಾಳೆಯ ಹಣ್ಣಿನ ಗಡದಲ್ಲಿ ೬೪ ಹಣ್ಣುಗಳಿದ್ದು ೭ ಹಣ್ಣುಗಳನ್ನು ಗಿಳಿ ಕುಕ್ಕಿದೆ. ಕುಕ್ಕದೆ ಇದ್ದ ಹಣ್ಣುಗಳೆಷ್ಟು ?

(೮) ಒಬ್ಬ ಹುಡುಗನು ಮಾಡತಕ್ಕ ೩೩ ಲೆಕ್ಕಗಳಲ್ಲಿ ೮ ಲೆಕ್ಕಗಳನ್ನು ಬಿಡಿಸಲಿಕ್ಕೆ ಬರಲಿಲ್ಲ. ಆದರೆ ಆತನು ಬಿಡಿಸಿದ ಲೆಕ್ಕಗಳೆಷ್ಟು ?

(೯) ೭೮ ಕಾಗದಗಳಲ್ಲಿ ೯ ಹರಿದಿದ್ದರೆ ಹರಿಯದಿದ್ದ ಕಾಗದಗಳೆಷ್ಟು ?

(೧೦) ಚರಕಗಳು: ೯೨—೭ =?

[೬]

ಈ ಮೊದಲಿಗೆ ಎರಡೆರಡು ಸಾರೆ ಲೆಕ್ಕಗಳನ್ನು ಬರೆದು ಬಿಡಿಸಬೇಕಾಗುತ್ತಿತ್ತು. ಆದರೆ ಒಂದೇ ಸರತಿಗೆ ಬಿಡಿಸಲಿಕ್ಕೂ ಬರುತ್ತದೆ. ಆ ರೀತಿಯನ್ನು ಕಲಿತುಕೊಳ್ಳುವದಕ್ಕಾಗಿ ಮುಂದಿನ ಲೆಕ್ಕಗಳನ್ನು ಚೆನ್ನಾಗಿ ನಿರೀಕ್ಷಿಸಿರಿ.

| | ಗೆಂಪಗಳು | | ರುಮಾಲುಗಳು | | ಬಟ್ಟಲುಗಳು | | ಕೊಡಗಳು | |
|---|---|---|---|---|---|---|---|---|
| ಮೊದಲಿನ ಬರೆಹ | ಹ. | ಬಿ. | ಹ | ಬಿ. | ಹ. | ಬಿ. | ಹ. | ಬಿ. |
| | ೨ | ೨ | ೩ | ೧ | ೪ | ೩ | ೫ | ೪ |
| | — | ೫ | — | ೪ | — | ೮ | —೧ | ೭ |
| ಹೆಗಂ. ಮುರಿಸಿದ ಬರೆಹ | ೧ | ೧೨ | ೨ | ೧೧ | ೩ | ೧೩ | ೪ | ೧೪ |
| | — | ೫ | — | ೪ | — | ೮ | —೧ | ೭ |

ಒಂದನೆಯ ಲೆಕ್ಕದಲ್ಲಿ ೨ ಬಿಡಿಕಾಳು ಇದ್ದಲ್ಲಿ (೧೦ ಮತ್ತು ೨) ೧೨ ಬಿಡಿಕಾಳು ಆಗಿವೆ. (ಅಂದರೆ ೨ರ ಹಿಂದೆ ೧ ಜೋಡಿಸಲ್ಪಟ್ಟಿವೆ.)

ಎರಡನೆಯ ಲೆಕ್ಕದಲ್ಲಿ ೧ ಬಿಡಿಕಾಳು ಇದ್ದಲ್ಲಿ (೧೦ ಮತ್ತು ೧) ೧೧ ಬಿಡಿಕಾಳು ಆಗಿವೆ. (ಅಂದರೆ ೧ರ ಹಿಂದೆ ೧ ಜೋಡಿಸಲ್ಪಟ್ಟಿದೆ.)

ಮೂರನೆಯ ಲೆಕ್ಕದಲ್ಲಿ ೩ ಬಿಡಿಕಾಳು ಇದ್ದಲ್ಲಿ (೧೦ ಮತ್ತು ೩) ೧೩ ಬಿಡಿಕಾಳು ಆಗಿವೆ. (ಅಂದರೆ ೩ರ ಹಿಂದೆ ೧ ಜೋಡಿಸಲ್ಪಟ್ಟಿದೆ.)

ನಾಲ್ಕನೆಯ ಲೆಕ್ಕದಲ್ಲಿ ೪ ಬಿಡಿಕಾಳು ಇದ್ದ ಸ್ಥಳದಲ್ಲಿ (೧೦ ಮತ್ತು ೪) ೧೪ ಬಿಡಿಕಾಳು ಆಗಿವೆ. (ಅಂದರೆ ೪ರ ಹಿಂದೆ ೧ ಜೋಡಿಸಲ್ಪಟ್ಟಿದೆ.)

ಇದೇ ರೀತಿ:—

೭ ಬಿಡಿಕಾಳು ಇದ್ದ ಸ್ಥಳದಲ್ಲಿ (೧೦ ಮತ್ತು ೭) ೧೭ ಬಿಡಿಕಾಳು ಆಗುವವು. (ಅಂದರೆ ೭ರ ಹಿಂದೆ ೧ ಜೋಡಿಸಬೇಕಾಗುವದು.)

೯ ಬಿಡಿಕಾಳು ಇದ್ದ ಸ್ಥಳದಲ್ಲಿ (೧೦ ಮತ್ತು ೯) ೧೯ ಬಿಡಿಕಾಳು ಆಗುವವು. (ಅಂದರೆ ೯ರ ಹಿಂದೆ ೧ ಜೋಡಿಸಬೇಕಾಗುವದು.)

ಇದನ್ನೇ ಅನುಸರಿಸಿ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಹುಡಿಕಿರಿ.

[ಅ] **೬ ಬಿಡಿಕಾಳು ಇದ್ದ ಸ್ಥಳದಲ್ಲಿ ಎಷ್ಟು ಬಿಡಿಕಾಳು ಆಗುವವು?**

[ಬ] **೮ ಬಿಡಿಕಾಳು ಇದ್ದ ಸ್ಥಳದಲ್ಲಿ ಎಷ್ಟು ಬಿಡಿಕಾಳು ಆಗುವವು?**

[ಕ] **೯ ಬಿಡಿಕಾಳು ಇದ್ದ ಸ್ಥಳದಲ್ಲಿ ಎಷ್ಟು ಬಿಡಿಕಾಳು ಆಗುವವು?**

ಮೇಲಿನ ನಿಯಮವನ್ನು ನೆನಪಿಟ್ಟು ಮುಂದಿನ ಲೆಕ್ಕಗಳನ್ನು ಬಿಡಿಸಿರಿ.

**ವಿಶಿಷ್ಟ ಉದಾ:** ರಾಮರಾಯರು ತಮ್ಮಲ್ಲಿದ್ದ ೮೪

ರೂಪಾಯಿಗಳಲ್ಲಿ ೫೮ ರೂ. ಗಳನ್ನು ಬಸಪ್ಪನಿಗೆ ಕೈಗಡ ಕೊಟ್ಟರು. ಆ ಬಳಿಕ ಅವರಲ್ಲಿ ಉಳಿದ ಹಣವೆಷ್ಟು ?

ಇದು ಕಳೆಯುವ ಲೆಕ್ಕ. ಏಕೆ?

**ಬರೆಹ:**

| ಹ. | ಬಿ. | |
|---|---|---|
| ೮ | ೪ | ರೂ. ಇದ್ದವು. |
| —೫ | ೮ | ರೂ ಕೈಗಡ. |
| ೧ | | |
| ೨ | ೬ | ರೂ ಉಳಿದವು |

**ಓದುವದು:**

ಬಿ ಕಳೆ:— ೮ರಲ್ಲಿ ಎಷ್ಟು ಕೂಡಿದರೆ ೧೪ ? ೬. ಕೈಲೆ ೧. ಹ. ಕಳೆ:-(೮ ಹ. ಗಂ. ಗಳಲ್ಲಿ ೧ ಹ. ಗಂ. ಮುರಿಸಿದೆ. ಇದು ೮ರಲ್ಲಿ ಕಡಿಮೆಯಾಗತಕ್ಕದ್ದು. ಆದರೆ ಲೆಕ್ಕದಲ್ಲಿ ೮ ಹಾಗೇ ಇದೆ. ಅಂದರೆ ೧ ಹ.ಗಂ. ಕಡಿಮೆಯಾಗಬೇಕಾಗಿದೆ. ಅದನ್ನು ೫ ಹ. ಗಂ. ಗಳ ಸಂಗಡಲೇ ಕಡಿಮೆ ಮಾಡಲಾಗುವದು. ಅದ್ದರಿಂದ ೫ ಹತ್ತರ ಗಂಟುಗಳಲ್ಲಿ ೧ ಕೂಡಿಸತಕ್ಕದ್ದು. ಇದಕ್ಕೇ ಲೆಕ್ಕಗಳಲ್ಲಿ ಕೈಲೆ ಅನ್ನುತ್ತಾರೆ.) ೧ರಲ್ಲಿ ೫ ಕೂಡಿದರೆ ೬. ೬ರಲ್ಲಿ ಎಷ್ಟು ಕೂಡಿದರೆ ೮ ಆಗುತ್ತದೆ? ೨. ∴ ೨ಕ್ಕೆ ೨.

∴ ೨೬ ರೂ. ಉಳಿದವು. ಉತ್ತರ.

## ಲೆಕ್ಕಗಳು

(೧) ಒಂದು ಕವಿತೆಯ ೩೬ ಸಾಲುಗಳಲ್ಲಿ ೧೮ ಸಾಲುಗಳನ್ನು ಗಿರೀಶನು ಬಾಯಿಪಾಠ ಮಾಡಿದನು. ಆದರೆ ಆತನು ಇನ್ನೂ ಪಾಠ ಮಾಡತಕ್ಕ ಸಾಲುಗಳೆಷ್ಟು ?

(೨) ಒಂದು ನೀರಿನ ಟಾಕಿಯಲ್ಲಿ ೩೪ ಕೊಡ ನೀರು ಹಿಡಿಯುತ್ತಿದ್ದು ಈಗ ಅದರಲ್ಲಿ ೧೬ ಕೊಡ ನೀರನ್ನು ಸುರುವಲಾಗಿದೆ. ಆದರೆ ಇನ್ನೆಷ್ಟು ಕೊಡ ನೀರನ್ನು ಸುರುವಿದರೆ ಆ ಟಾಕಿ ತುಂಬುವದು ?

| | | |
|---|---|---|
| (೩) ೬೦ ಪಟಾಕ್ಷಿ | (೪) ೮೦ ಪಾಕೀಟು | (೫) ೯೦ ಲಾರಿಗಳು |
| —೩೫ ಪಟಾಕ್ಷಿ | —೨೮ ಪಾಕೀಟು | —೩೮ ಲಾರಿಗಳು |
| (೬) ೭೦ ಕಾರ್ಡುಗಳು | (೭) ೭೧ ತಿಕೀಟು | (೮) ೫೨ ಹುಡುಗರು |
| —೪೭ ಕಾರ್ಡುಗಳು | —೪೬ ತಿಕೀಟು | —೨೮ ಹುಡುಗರು |

(೯) ೪೩ ಲಡಿಗಳು (೧೦) ೪೫ ರೂ. (೧೧) ೭೪ ದೀಪಗಳು
—೧೮ ಲಡಿಗಳು —೨೭ ರೂ. —೫೯ ದೀಪಗಳು

(೧೨) ೪೫ ದೌತಿಗಳು (೧೩) ೮೬ ಪಿನ್ನುಗಳು (೧೪) ೬೭ ಅಂಜೀರು
—೩೮ ದೌತಿಗಳು —೭೯ ಪಿನ್ನುಗಳು —೪೯ ಅಂಜೀರು

(೧೫) ೫೭ ರೂ. ಗಳಿಗೆ ಒಂದು ಗಡಿಯಾರವನ್ನು ಕೊಂಡು ಅದನ್ನು ೭೫ ರೂ. ಗಳಿಗೆ ಮಾರಿದರೆ ನಮಗೆ ಹೆಚ್ಚಿಗೆ ದೊರೆಯುವ ಹಣವೆಷ್ಟು ?

(೧೬ ಒಂದು ಪುಸ್ತಕದಲ್ಲಿ ೮೫ ಕತೆಗಳಿದ್ದು ಅವುಗಳಲ್ಲಿ ೪೬ ಕತೆಗಳನ್ನು ಓದಲಾಗಿದೆ. ಈಗ ಓದಬೇಕಾದ ಕತೆಗಳೆಷ್ಟು ?

(೧೭) ಬಳೆಗಾರ ಭೀಮಪ್ಪನು ನಾಗರಪಂಚಮಿ ದಿನ ತನ್ನಲ್ಲಿದ್ದ ೪೭೪ ಬಳೆಗಳಲ್ಲಿ ೨೫೯ ಬಳೆಗಳನ್ನು ಮಾರಿದನು. ಈಗ ಆತನಲ್ಲಿ ಎಷ್ಟು ಬಳೆಗಳು ಉಳಿದಿರಬೇಕು ?

(೧೮) ೩೪೬ ಉತ್ತತ್ತಿ — ೧೨೮ — ಉತ್ತತ್ತಿ = ?

(೧೯) ೪೯೮ ಮೋಜು — ೩೭೯ ಮೋಜು = ?

(೨೦) ೬೪೫ ಗುಳಿಗೆ — ೨೪೯ — ಗುಳಿಗೆ = ?

[೭]

**ವಿಶಿಷ್ಟ ಉದಾ:** ರಂಗನಾಥನು ತನ್ನ ಮನೆಯ ಪಡಸಾಲೆಗೆ ಕಲ್ಲುಹಾಸಿಗೆ ಮಾಡಿಸುವವನಿದ್ದನು. ಆ ನೆಲಕ್ಕೆ ೩೫೫ ಕಲ್ಲುಗಳು ಬೇಕಾಗಿದ್ದವು. ಈಗ ಅವನಲ್ಲಿ ೨೬೦ ಕಲ್ಲುಗಳಿದ್ದರೆ ಅವನು ಇನ್ನೆಷ್ಟು ಕಲ್ಲುಗಳನ್ನು ತರಿಸಬೇಕಾಗುವದು ?

ಇದು ಕಳೆಯುವ ಲೆಕ್ಕ. (ಏಕೆ ?)

**ಬರೆಹ:**

| ನೂ. | ಹ. | ಬಿ. | |
|---|---|---|---|
| ೩ | ೫ | ೫ | ಕಲ್ಲು |
| -೨ | ೬ | ೦ | ಕಲ್ಲು |
| ೧ | | | |
| ೦ | ೯ | ೫ | ಕಲ್ಲು |

**ಓದುವದು:** ಬಿ. ಕಳೆ— ೫ಕ್ಕೆ ೫. ಹ. ಕಳೆ— ೫ರಲ್ಲಿ ೬ ವಜಾ ಮಾಡಲು ಬರುವದಿಲ್ಲ. ೧ನೂ. ೧೦. ತೆಗೆದುಕೊಂಡು ಮುರಿಸಿದರೆ ಎಷ್ಟು ಹತ್ತರ ಗಂಟುಗಳಾಗುವವು ? ೧೦. ಈ ೧೦ ಮತ್ತು ೫ ಕೂಡಿದರೆ ೧೫ ಹತ್ತರ ಗಂಟುಗಳಾದವು. ೬ ರಲ್ಲಿ ಎಷ್ಟು ಕೂಡಿದರೆ ೧೫? ೯. ∴ ೯ಕ್ಕೆ ೯. ಕೈಲೆ ೧. ನೂ. ಕಳೆ:— ಕೈಲೆ ೧ ಮತ್ತು

೨ ಕೂಡಿದರೆ ೩. ಇರಲ್ಲಿ ೩ ಕಡಿಮೆಯಾದರೆ ೦. ∴ ೦ಗೆ ೦.

∴ ೯೫ ಕಲ್ಲುಗಳು ಉತ್ತರ.

## ಲೆಕ್ಕಗಳು

(೧) ಕುಸುನೂರ ಹಳ್ಳಿ ಶಾಲೆಗೆ ಹೋದ ವರುಷ ೮೨೫ ರೂ. ಗ್ರ್ಯಾಂಟು ದೊರೆತಿತ್ತು. ಈ ವರುಷ ೭೪೬ ರೂ. ದೊರೆತರೆ ಕಳೆದ ವರುಷಕ್ಕಿಂತ ಎಷ್ಟು ರೂ. ಕಡಿಮೆಯಾದಂತಾಯಿತು ?

(೨) ೧೫೦ ರೂ.ಗಳ ಕಣಿಕೆ ಕೊಂಡು ನೂರರ ಎರಡು ನೋಟು ಕೊಟ್ಟರೆ ತಿರುಗಿ ದೊರೆಯುವ ಹಣವೆಷ್ಟು ?

(೩) ಗೋವಿಂದನು ಒಂದು ತಾಸಿನಲ್ಲಿ ೯೬ ಸುತ್ತು ನೂತನು. ಜೀವಪ್ಪನು ೧೨೬ ಸುತ್ತು ನೂತನು. ಅಂದರೆ ಜೀವಪ್ಪನು ಎಷ್ಟು ಹೆಚ್ಚು ಸುತ್ತು ನೂತಂತಾಯಿತು ?

(೪) ಗುಂಡೂನಿಗೆ ೩೭೨ ಬಾಳೆ ಎಲೆಗಳನ್ನು ಕೊಯ್ದು ತರಲಿಕ್ಕೆ ಹೇಳಿದರೆ ಆತನು ೨೯೪ ಮಾತ್ರ ಕೊಯ್ದು ತಂದನು. ಈಗ ಅವನು ಎಷ್ಟು ಕಡಿಮೆ ಎಲೆಗಳನ್ನು ತಂದಂತಾಯಿತು ?

(೫) ಒಂದು ಶಾಲೆಯಲ್ಲಿ ಹುಡುಗ ಹುಡಿಗೆಯರು ಕೂಡಿ ೫೬೪ ಇದ್ದರು. ಅವರಲ್ಲಿ ೩೪೮ ಹುಡುಗರಿದ್ದರೆ ಆ ಶಾಲೆಯಲ್ಲಿದ್ದ ಹುಡಿಗೆಯರ ಸಂಖ್ಯೆ ಎಷ್ಟು ?

| (೬) | (೭) | (೮) |
|---|---|---|
| ೧೦೭ ಮಿಣಿಗಳು | ೧೨೪ ರೆಂಟೆಗಳು | ೫೨೩ ಕುಂಟಿಗಳು |
| — ೬೪ ಮಿಣಿಗಳು | — ೮೫ ರೆಂಟೆಗಳು | — ೩೪೪ ಕುಂಟಿಗಳು |

(೯) ೫೬೩ ಕಾಗದದ ಹೂವುಗಳಲ್ಲಿ ೨೮೫ ಹೂವು ಮಾರಿದರೆ ಉಳಿದ ಹೂವುಗಳೆಷ್ಟು?

(೧೦) ಒಂದು ಯಂತ್ರವನ್ನು ೩೨೩೫ ರೂ.ಗಳಿಗೆ ಕೊಂಡು ಕೂಡಲೇ ೯೮೬ ರೂ.ಗಳನ್ನು ಕೊಟ್ಟೆವು. ಇನ್ನೆಷ್ಟು ಕೊಟ್ಟರೆ ಅದರ ಬೆಲೆ ಪೂರ್ಣ ಮುಟ್ಟುವದು ?

(೧೧) ಮಂಗಳೂರಿನಿಂದ ೫೫೦೦ ಹಂಚುಗಳನ್ನು ತರಿಸಿ

ದೆವು. ಅವುಗಳಲ್ಲಿ ೨೮೭೭ ಹಂಚುಗಳನ್ನು ಮಾರಿಬಿಟ್ಟೆವು. ಈಗ ಉಳಿದ ಹಂಚುಗಳೆಷ್ಟು ?

(೧೨) ಒಂದು ಊರಿನ ಜನಸಂಖ್ಯೆ ೭೫೧೪ ಇದ್ದು ಬರಗಾಲದ ಮೂಲಕ ೨೮೩೨ ಜನರು ಊರು ಬಿಟ್ಟುಹೋದರು. ಈಗ ಊರಲ್ಲಿ ಉಳಿದುಕೊಂಡ ಜನರೆಷ್ಟು ?

(೧೩) ಒಂದು ಹೊಲವನ್ನು ೭೪೪೩ ರೂ.ಗಳಿಗೆ ಕೊಂಡು ೮೦೦೦ ರೂ. ಗಳಿಗೆ ಮಾರಿದರೆ ನಮಗೆ ಹೆಚ್ಚಿಗೆ ದೊರೆತ ಹಣವೆಷ್ಟು ?

(೧೪) ೬೨೦೪ − ೨೩೧೨ = ? (೧೫) ೫೦೦೭ − ೪೧೧೯ = ?

(೧೬) ೯೧೦೮ ರೂ. − ೭೨೮೯ ರೂ. = ?

---

## ೩. ಗಣಿತ ಸಮುದಾಯ



(೧ರಿಂದ ೪೦ ರ ವರೆಗೆ ಬಾಯಿಲೆಕ್ಕ ಬಿಡಿಸಿರಿ. ಬಳಿಕ ಈ ವಿಭಾಗದಲ್ಲಿಯ ಎಲ್ಲ ಲೆಕ್ಕಗಳನ್ನು ಪಾಟಿಯಲ್ಲಿ ಬಿಡಿಸಿರಿ.)

(೧) ೪ ಮತ್ತು ೪ ಕೂಡಿದರೆ ೮, ೮ ಮತ್ತು ೪ ಕೂಡಿದರೆ ೧೨, ಇದೇ ರೀತಿ ೭೨ ಬರುವ ವರೆಗೆ ಎಣಿಸಿರಿ.

(೨) ೬ ಮತ್ತು ೨ ಕೂಡಿದರೆ ೮, ೨೬ ಮತ್ತು ೨ ಕೂಡಿ ಕೂಡಿದರೆ ೨೮, ಇದೇ ರೀತಿ ೯೮ ಬರುವ ವರೆಗೆ ಎಣಿಸಿರಿ.

(೩) ಒಂದು ಪೆಟ್ಟಿಗೆಯಲ್ಲಿ ೩೦ ಪುಸ್ತಕಗಳೂ, ಇನ್ನೊಂದರಲ್ಲಿ ೪೦ ಪುಸ್ತಕಗಳೂ ಇದ್ದರೆ ಎರಡರಲ್ಲಿಯೂ ಕೂಡಿ ಒಟ್ಟು ಪುಸ್ತಕಗಳೆಷ್ಟು ?

(೪) ಶಾಲಾ ಬಾಲಕರಿಗೆ ೫೫ ಪೇಡೆಗಳನ್ನು ಹಂಚಿದ ಬಳಿಕ ೭ ಪೇಡೆಗಳು ಉಳಿದರೆ ಮೊದಲಿಗೆ ತರಿಸಿದ ಒಟ್ಟು ಪೇಡೆಗಳೆಷ್ಟು ?

(೫) ೩೦ರಲ್ಲಿ ೧೦ ಕೂಡಿದರೆ ೪೦; ೪೦ರಲ್ಲಿ ೧೦ ಕೂಡಿದರೆ ೫೦. ಇದೇ ರೀತಿ ೧೪೦ ಬರುವ ವರೆಗೆ ಕೂಡಿಸುತ್ತ ಹೋಗಿರಿ.

(೬) ೮ರಲ್ಲಿ ೧೦ ಕೂಡಿದರೆ ೧೮; ೧೮ರಲ್ಲಿ ೧೦ ಕೂಡಿದರೆ ೨೮. ಇದೇ ರೀತಿ ೧೦೮ ಬರುವ ವರೆಗೆ ಹೇಳಿರಿ.

(೭) ೧೫ರಲ್ಲಿ ೩೦ ಕೂಡಿದರೆ ೪೫; ೪೫ರಲ್ಲಿ ೩೦ ಕೂಡಿದರೆ ೭೫. ಹೀಗೆಯೇ ೨೫೫ ಬರುವ ವರೆಗೆ ಕೂಡಿಸುತ್ತ ಹೋಗಿರಿ.

(೮) ೧೦ರಲ್ಲಿ ೨೫ ಕೂಡಿದರೆ ೩೫; ೩೫ರಲ್ಲಿ ೨೫ ಕೂಡಿದರೆ ೬೦. ಇದೇ ರೀತಿ ೧೩೫ ಬರುವ ವರೆಗೆ ಕೂಡಿಸಿರಿ.

**(ಯಾವದೊಂದು ಸಂಖ್ಯೆಯಲ್ಲಿ ೧೦, ೨೦, ೩೦ ಇತ್ಯಾದಿ ಹತ್ತರ ಗಂಟುಗಳನ್ನು ಕೂಡಿಸುವದು ಸುಲಭ. ಆದ್ದರಿಂದ (ಅ) "೨೨ರಲ್ಲಿ ೧೨ನ್ನು ಕೂಡಿಸತಕ್ಕದ್ದಿದೆ" ಯೆಂದು ತಿಳಿಯಿರಿ. ೨೨ರಲ್ಲಿ ೧೦ ಕೂಡಿಸಿರಿ, ೩೨ ಬಂತು; ೩೨ರಲ್ಲಿ ೨ನ್ನು ಕೂಡಿಸಿದರೆ ೩೪ ಉತ್ತರ ಬಂತು. ೧೨ ಕೂಡಿಸುವದೆಂದರೆ ಮೊದಲು ೧ ಹತ್ತರ ಗಂಟು ಕೂಡಿಸಿ ಬಳಿಕ ೨ ಬಿಡಿಕಾಳು ಕೂಡಿಸುವದೇ ಆಗಿದೆ. (ಬ) "೭೮ರಲ್ಲಿ ೯ ಕೂಡಿಸತಕ್ಕದ್ದಿದೆ." ೭೮ರಲ್ಲಿ ೧೦ ಕೂಡಿದರೆ ೮೮ ಬಂತು, ೮೮ರಲ್ಲಿ ೧ ಬಿಡಿಕಾಳು ವಜಾ ಮಾಡಿದರೆ ೮೭ ಉತ್ತರ ಬಂತು. ೯ ಕೂಡಿಸುವದೆಂದರೆ ೧೦ನ್ನು ಕೂಡಿಸಿ ೧ನ್ನು ಕಳೆಯುವದೇ ಆಗಿದೆ.)**

(೯) ೩೦ + ೧೧ = ?
(೧೦) ೩೩ + ೧೪ = ?
(೧೧) ೨೪ + ೧೯ = ?
(೧೨) ೩೫ + ೨೧ = ?
(೧೩) ೪೪ + ೨೨ = ?
(೧೪) ೪೮ + ೩೨ = ?
(೧೫) ೬೪ + ೨೫ = ?
(೧೬) ೩೩ + ೨೮ = ?
(೧೭) ೫೭ + ೩೪ = ?

(೧೮) ೯೦ರಲ್ಲಿ ೧೦ ಕಳೆದರೆ ೮೦; ೮೦ರಲ್ಲಿ ೧೦ ಕಳೆದರೆ ೭೦; ಹೀಗೆಯೇ ೦ ಬಾಕಿ ಉಳಿಯುವ ವರೆಗೆ ಕಳೆಯುತ್ತ ಹೋಗಿರಿ.

(೧೯) ೯೦ರಲ್ಲಿ ೨೦ ಕಳೆದರೆ ೭೦ ಉಳಿಯಿತು. ಇದೇ ರೀತಿ ಬಾಕಿ ೧೦ ಉಳಿಯುವ ವರೆಗೆ ೨೦ರಂತೆ ಕಳೆಯುತ್ತ ಹೋಗಿರಿ.

(೨೦) ೫೦ − ೩೦ = ?     (೨೧) ೮೦−೫೦ = ?

(೨೨) ೯೦ − ೬೦ = ?

(ಯಾವದೊಂದು ಸಂಖ್ಯೆಯಲ್ಲಿ ೧೦, ೨೦ ಇತ್ಯಾದಿ ಹತ್ತರ ಗಂಟು ಗಳನ್ನು ಕಳೆಯುವದು ಸುಲಭ. ಆದ್ದರಿಂದ (ಅ) "೩೬ರಲ್ಲಿ ೧೨ ಕಳೆಯುತಕ್ಕದ್ದಿದೆ" ಎಂದು ತಿಳಿಯಿರಿ. ೩೬ರಲ್ಲಿ ೧೦ ಕಳೆದರೆ ೨೬; ೨೬ರಲ್ಲಿ ೨ ಕಳೆದರೆ ೨೪ ಉತ್ತರ ಬಂತು. ೧೨ ಕಳೆಯುವದೆಂದರೆ ಮೊದಲು ೧ ಹತ್ತರ ಗಂಟನ್ನು ಕಳೆದು ಬಳಿಕ ೨ ಬಿಡಿಕಾಳು ಕಳೆಯುವದೇ ಆಗಿದೆ. (ಬ) "೪೮ ರಲ್ಲಿ ೯ ಕಳೆಯತಕ್ಕದ್ದಿದೆ." ೪೮ರಲ್ಲಿ ೧೦ ಕಳೆದರೆ ೩೮; ೩೮ರಲ್ಲಿ ೧ ಕೂಡಿಸಿದರೆ ೩೯ ಉತ್ತರ ಬಂತು. ೯ ಕಳೆಯುವದೆಂದರೆ ೧೦ ಕಳೆದು ೧ ಕೂಡಿಸುವದೇ ಆಗಿದೆ.)

(೨೩) ೩೩−೧೧ =?     (೨೪) ೪೮ − ೨೧ = ?

(೨೫) ೮೩−೩೩ =?     (೨೬) ೭೭ − ೨೮ = ?

(೨೭) ೫೮ − ೯ =?     (೨೮) ೭೫ − ೧೯ = ?

(೨೯) ೮೯ −೨೯ =?     (೩೦) ೯೧ − ೩೯ = ?

(೩೧) ೯೭ −೫೧ =?

**(೩೨)** ೨೪ ರೂಗಳ ಅರಿವೆಯನ್ನು ಕೊಂಡು ಹತ್ತರ ೩ ನೋಟುಗಳನ್ನು ಕೊಟ್ಟರೆ ನಮಗೆ ತಿರುಗಿ ದೊರೆಯುವ ರೂಪಾಯಿ ಗಳೆಷ್ಟು ?

(೩೩) ೧೫೦ ರೂ. ಗಳಿಗೆ ದೊರೆಯುವ ಪೀತಾಂಬರವು ಈಗ ೧೯೫ ರೂ. ಗಳಿಗೆ ಮಾರತೊಡಗಿದರೆ ಅದರ ಬೆಲೆಯು ಮೊದಲಿನಕಿಂತ ಎಷ್ಟು ಹೆಚ್ಚು ಆದಂತಾಯಿತು ?

(೩೪) ೩೫೦೦ ರೂ. ಗಳಿಗೆ ಒಂದು ಮನೆ ಕೊಂಡು ೧೦೦೦ ರೂ. ಸಂಚಕಾರ ಕೊಟ್ಟರೆ ಕೊಡತಕ್ಕ ಬಾಕಿ ಹಣವೆಷ್ಟು?

* ಹೀಗೆ ಹೂವಿದ್ದಲ್ಲಿ ಸಂಖ್ಯೆಯನ್ನು ತುಂಬಿರಿ.

**೩೫)** ೧೫+ * = ೪೦     (೩೬) * + ೫೦ = ೮೦

**(೩೭)** ೬೧− * = ೩೦     (೩೮) * − ೨೪ = ೫೮

(೩೯) ದೊರೆತ ಪಗಾರದಲ್ಲಿ ೩೫ ರೂ. ವಿಮಾಕಂತು ತುಂಬಿದ ಮೇಲೆ ೯೦ ರೂ. ಉಳಿದರೆ ನನ್ನ ತಿಂಗಳ ಪಗಾರವೆಷ್ಟು ?

(೪೦) ೨೫ ಮೈಲು ದೂರವಿರುವ ಒಂದು ಊರಿಗೆ ಹೋಗ ಬೇಕಾಗಿದೆ. ಈಗಾಗಲೇ ೧೯ ಮೈಲು ನಡೆದಿದ್ದರೆ ಇನ್ನೆಷ್ಟು ಮೈಲು ನಡೆಯಬೇಕಾಗುವದು ?

(೪೧) ೬೭೦ ವಿದ್ಯಾರ್ಥಿಗಳಲ್ಲಿ ೬೩೦ ವಿದ್ಯಾರ್ಥಿಗಳು ಪಾಸಾದರೆ ಪಾಸಾಗದ ವಿದ್ಯಾರ್ಥಿಗಳೆಷ್ಟು ?

(೪೨) ೯೦ ಹಂಜಿಗಳನ್ನು ನೂತಿದ್ದು, ೭೬ ಹಂಜಿಗಳನ್ನು ನೂಲುವದಿದೆ. ಆದರೆ ಮೊದಲು ನಮ್ಮಲ್ಲಿದ್ದ ಹಂಜಿಗಳೆಷ್ಟು ?

(೪೩) ೬೬೬೬ ಈ ಸಂಖ್ಯೆಯಲ್ಲಿ ಪ್ರತಿಯೊಂದು ಅಂಕಿಯ ಬೆಲೆ ಎಷ್ಟು ?

(೪೪) ೫೯೭೬ ರೂ. ಈ ಸಂಖ್ಯೆಯಲ್ಲಿಯ ೯ರ ಬೆಲೆ ಮತ್ತು ೬೯೫ ರೂ. ಈ ಸಂಖ್ಯೆಯಲ್ಲಿಯ ೯ರ ಬೆಲೆ ಇವುಗಳಲ್ಲಿರುವ ಅಂತರ ವೇನು ?

(೪೫) ೪೦ ಸೂಜಿಗಳು + ೩೦ ಸೂಜಿಗಳು + ೨೦ ಸೂಜಿಗಳು = ?

(೪೬) ೨೦ + ೪೦ + * = ೯೦. ಹೂವಿದ್ದ ಸ್ಥಳದಲ್ಲಿ ಯಾವ ಸಂಖ್ಯೆ ಇರಬಹುದು ?

(೪೭) ೫ ೬ * ೨ ಈ ಸಂಖ್ಯೆಯಲ್ಲಿಯ ಎಲ್ಲ ಅಂಕಿಗಳ ಬೇರೀಜು ೨೦ ಆಗುತ್ತಿದ್ದರೆ ಹೂವಿದ್ದ ಸ್ಥಳದಲ್ಲಿ ಯಾವ ಅಂಕಿ ಇರಬಹುದು?

(೪೮) ಕಲ್ಲನಲ್ಲಿ ೬೫ ಕಾಗದಗಳಿದ್ದವು. ಸೋಮನಲ್ಲಿ ೮೫ ಕಾಗದಗಳಿದ್ದವು. ಕಲ್ಲನಿಗಿಂತಲೂ ಸೋಮನಲ್ಲಿ ಎಷ್ಟು ಹೆಚ್ಚು ಕಾಗದಗಳಿವೆ ?

(೪೯) ೩೬ ಸೇರು – * = ೧೦ ಸೇರು. ಹೂವಿದ್ದಲ್ಲಿ ಯಾವ ಸಂಖ್ಯೆ ಇರಬಹುದು ? ಅದನ್ನು ಹೇಗೆ ಹುಡುಕುವಿರಿ ?

(೫೦) ೭೬೩ – * = ೪೦೦ (೫೧) ೪೧೦೨ – * = ೨೯೨೫

(೫೨) ಶ್ರೀಕಾಂತರಾಯರು ತಮಗೆ ದೊರೆತ ೧೪೫ ರೂ. ಸಂಬಳದಲ್ಲಿ ಕೆಲವು ರೂಪಾಯಿ ಕೊಟ್ಟು ಗೋದಿ ಕೊಂಡರು. ಆಮೇಲೆ ಅವರಲ್ಲಿ ೭೮ ರೂ. ಉಳಿದಿದ್ದರೆ ಅವರು ಕೊಂಡ ಗೋದಿಯ ಬೆಲೆ ಎಷ್ಟಿರಬೇಕು ?

(೫೩) ೬೭೪ ಹುಡುಗರಲ್ಲಿ ೬೮ ಹುಡುಗರು ನಾಪಾಸಾದರೆ ಪಾಸಾದ ಹುಡುಗರೆಷ್ಟು ?

(೫೪) ೪೭೩ ರೂ. ಗಳ ಅಕ್ಕಿಯನ್ನು ಕೊಂಡೆವು. ಅಕ್ಕಿಯಷ್ಟೇ ಗೋದಿಯನ್ನು ಕೊಳ್ಳಲಿಕ್ಕೆ ೭೪ ರೂ. ಹೆಚ್ಚು ಕೊಟ್ಟೆವು. ಆದರೆ ನಾವು ಕೊಂಡ ಗೋದಿಯ ಬೆಲೆ ಎಷ್ಟು ?

(೫೫) ಈರಪ್ಪಶೆಟ್ಟರು ೪೨೫ ರೂ.ಗಳ ಗೋದಿಯನ್ನೂ, ೩೭೫ ರೂ. ಗಳ ಭತ್ತವನ್ನೂ, ೬೩೮ ರೂ. ಗಳ ನವಣೆಯನ್ನೂ ಕೊಂಡರು. ಎಲ್ಲ ಕಾಳುಗಳ ಬೆಲೆಯನ್ನು ಕೊಟ್ಟ ಬಳಿಕ ಅವರಲ್ಲಿ ನೂರರ ೫ ನೋಟುಗಳು ಉಳಿದಿದ್ದರೆ ಮೊದಲು ಅವರಲ್ಲಿದ್ದ ಹಣವೆಷ್ಟು ?

(೫೬) ಸವದತ್ತಿಯಿಂದ ಧಾರವಾಡ ೨೪ ಮೈಲು, ಅಲ್ಲಿಂದ ಬಂಕಾಪುರ ೯೬ ಮೈಲು, ಅಲ್ಲಿಂದ ಹರಿಹರ ೫೫ ಮೈಲು ದೂರವಿದ್ದರೆ ಸವದತ್ತಿಯಿಂದ ಹರಿಹರವು ಎಷ್ಟು ದೂರವಿರಬೇಕು ?

(೫೭) ಒಂದು ಕಾಗದದ ಗಂಟಿನಲ್ಲಿ ೫೭೬ ಕಾಗದಗಳಿವೆ. ಇನ್ನೊಂದರಲ್ಲಿ ಅದಕ್ಕಿಂತ ೮೭ ಕಾಗದ ಹೆಚ್ಚಿಗಿವೆ. ಆದರೆ ಎರಡೂ ಗಂಟುಗಳಲ್ಲಿದ್ದ ಒಟ್ಟು ಕಾಗದಗಳೆಷ್ಟು ?

(೫೮) ಒಂದು ಮಾವಿನ ಗಿಡದಿಂದ ೬೦೩೫ ಕಾಯಿಗಳನ್ನು ಇಳಿಸಿದ್ದೇವೆ. ಇನ್ನೆಷ್ಟು ಕಾಯಿಗಳನ್ನು ಇಳಿಸಿದರೆ ೭೦೦೦ ಕಾಯಿಗಳಾಗುತ್ತವೆ ?

(೫೯) ಒಂದು ಊರಲ್ಲಿ ೯೪೨೨ ಜನರಿದ್ದಾರೆ. ಅವರಲ್ಲಿ ೫೯೭೫ ಹಿಂದುಗಳೂ, ೧೬೮೪ ಮುಸಲ್ಮಾನರೂ, ಉಳಿದವರು ಇತರ ಜಾತಿಯವರಿದ್ದರೆ ಉಳಿದ ಜಾತಿಯ ಜನರೆಷ್ಟು ?

(೬೦) ಗಂಡುಮಕ್ಕಳ ಶಾಲೆಯಲ್ಲಿ ೫೯೧ ಹುಡುಗರಿದ್ದಾರೆ. ಹೆಣ್ಣುಮಕ್ಕಳ ಶಾಲೆಯಲ್ಲಿ ಅದಕ್ಕಿಂತ ೨೨೫ ಹುಡುಗರು ಕಡಿಮೆ ಯಿದ್ದಾರೆ. ಉರ್ದು ಶಾಲೆಯಲ್ಲಿ ೧೪೪ ಹುಡುಗರಿದ್ದಾರೆ. ಮೂರೂ ಶಾಲೆಗಳಲ್ಲಿ ಒಟ್ಟು ಹುಡುಗರ ಸಂಖ್ಯೆ ಎಷ್ಟು? ಹೆಣ್ಣುಮಕ್ಕಳ ಶಾಲೆಯಲ್ಲಿದ್ದ ಹುಡುಗಿಯರೆಷ್ಟು?

(೬೧) ಒಂದು ಎತ್ತಿನ ಜೋಡಿ ಹಾಗೂ ಒಂದು ಚಕ್ಕಡಿಯ ಬೆಲೆ ಕೂಡಿ ೧೪೩೩ ರೂ. ಕೊಡಬೇಕಾಯಿತು. ಪ್ರತಿಯೊಂದು ಎತ್ತಿಗೆ ೫೬೧ ರೂ. ಗಳಂತೆ ಕೊಟ್ಟಿದ್ದರೆ ಚಕ್ಕಡಿಯ ಬೆಲೆ ಎಷ್ಟಿರಬೇಕು?

(೬೨) ೭೬+೭೩೭೦−೫೯೯+೧೦೦−೪೮=?

## ೪. ಗುಣಿಸುವದು



[೧]

**ವಿಶಿಷ್ಟ ಉದಾ:** ೧ ದುಡ್ಡಿಗೆ ೨ ಹಣ್ಣು, ಆದರೆ ೨ ದುಡ್ಡುಗಳಿಗೆ ಎಷ್ಟು ಹಣ್ಣು ಬರುವವು?

ಈಗ ೨+೨ ಹೀಗೆ ಬೇರೀಜು ಮಾಡಬೇಕಾಗಿದೆ; ಅಂದರೆ ಉತ್ತರ ೪ ಹಣ್ಣು ಬರುತ್ತದೆ. ಇದೇ ಉತ್ತರವನ್ನು "೨ ಎರಡಲೆ ೪" ಹೀಗೆ ಮಗ್ಗಿಯನ್ನು ಅಂದುಕೊಂಡೂ ಉತ್ತರವನ್ನು ತೆಗೆಯಲಿಕ್ಕೆ ಬರುತ್ತದೆ.

**ವಿಶಿಷ್ಟ ಉದಾ:** ಒಂದು ಅಂಗಿಗೆ ೪ ಬಿರಡಿಗಳು. ಆದರೆ ೫ ಅಂಗಿಗಳಿಗೆ ಎಷ್ಟು ಬಿರಡಿಗಳು ಬೇಕಾಗುವವು?

ಈಗ ೪+೪+೪+೪+೪ ಹೀಗೆ ಬೇರೀಜು ಮಾಡಿದರೆ ೨೦ ಬಿರಡಿಗಳು ಉತ್ತರ ಬರುತ್ತದೆ. ಇದೇ ಉತ್ತರವನ್ನು "೪ ಐದಲೆ

೧೦” ಹೀಗೆ ಮಗ್ಗಿಯನ್ನು ಅಂಸುಕೊಂಡು ಕೂಡಲೇ ಉತ್ತರ ವನ್ನು ಹೇಳಲಿಕ್ಕೆ ಬರುತ್ತದೆ.

ಇನ್ನು 'ಒಂದು ಕಿಸೆಯಲ್ಲಿ ೨ ಆಣೆ, ಇನ್ನೊಂದರಲ್ಲಿ ೩ ಆಣೆ ಇದ್ದರೆ ಎರಡೂ ಕಿಸೆಗಳಲ್ಲಿದ್ದ ಒಟ್ಟು ಆಣೆಗಳೆಷ್ಟು?' ಈ ಲೆಕ್ಕದ ಉತ್ತರವನ್ನು ೨+೩=೫ ಆ. ಹೀಗೆ ಬೇರೀಜು ಮಾಡಿಯೇ ತೆಗೆಯಬೇಕಾಗುತ್ತದೆ. ಆದರೆ ಮಗ್ಗಿಯ ಸಹಾಯದಿಂದ ಬರ ಲಾರದು. ಯಾಕಂದರೆ ಈ ಮೊದಲಿನ ಲೆಕ್ಕಗಳಲ್ಲಿ **ಮೊದಲಿನ ಸಂಖ್ಯೆಯೇ ಮತ್ತೆ ಮತ್ತೆ ಬರುತ್ತದೆ.** ಆದುದರಿಂದ ಮಗ್ಗಿಯ ಸಹಾಯದಿಂದ ಕೂಡಲೇ ಹೇಳಲಿಕ್ಕೆ ಬಂದಿತು. ಇಂಥ ಲೆಕ್ಕಗಳಿಗೇ **ಗುಣಾಕಾರದ** ಲೆಕ್ಕಗಳೆಂದು ಅನ್ನುವರು. ಮೊದಲಿನ ಎರಡೂ ಲೆಕ್ಕಗಳು ಗುಣಾಕಾರದವು. ಗುಣಾಕಾರದ ಚಿಕ್ಕ ಚಿಕ್ಕ ಲೆಕ್ಕ ಗಳನ್ನು ನೀವು ಸಹಜವಾಗಿ ಬಿಡಿಸಬಲ್ಲಿರಿ. ಇನ್ನು ಮೇಲಿನ ಲೆಕ್ಕ ಗಳನ್ನು ಕೆಳಗಿನಂತೆ ಬಿಡಿಸುತ್ತಾರೆ.

| | | | |
|---|---|---|---|
| ೨ ಹಣ್ಣು<br>೨ ಸಾರೆ<br>೪ ಹಣ್ಣು | ಇದೇ ಲೆಕ್ಕವನ್ನು | ೨ ಹಣ್ಣು<br>× ೨<br>೪ ಹಣ್ಣು | ಹೀಗೆ ಬರೆದು ಬಿಡಿಸುತ್ತಾರೆ. |

| | | | |
|---|---|---|---|
| ೪ ಬೀಡಿ<br>೩ ಸಾರೆ<br>೧೨ ಬೀಡಿ | ಈ ಲೆಕ್ಕ ವನ್ನು | ೪ ಬೀಡಿ<br>× ೩<br>೧೨ ಬೀಡಿ | ಹೀಗೆ ಬರೆದು ಬಿಡಿಸುತ್ತಾರೆ |

ಇನ್ನೊಂದು ರೀತಿಯೂ ಉಂಟು:

೨ ಹಣ್ಣು × ೨ = ೪ ಹಣ್ಣು; ೪ ಬಿ. × ೩ = ೧೨ ಬಿ. ಹೀಗೂ ಬರೆಯುವರು.

ಮೇಲಿನ ಲೆಕ್ಕಗಳನ್ನು ಬೇರೆ ಬೇರೆ ಎರಡು ರೀತಿಗಳಿಂದ ಬಿಡಿಸುವರೆಂಬುದನ್ನು ನೀವು ತಿಳಿದುಕೊಂಡಿರಿ. ಎರಡರ ಉತ್ತರವೂ

ಅಷ್ಟಷ್ಟೇ ಬಂದಿದೆ. ಆದರೆ ಎರಡನೇ ಸಲದ ಬರೆಹದಲ್ಲಿ "ಸಾರೆ" ಎಂಬ ಶಬ್ದದ ಬದಲು × ಈ ಗುರುತನ್ನು ಉಪಯೋಗಿಸಲಾಗಿದೆ. ಗುರುತಿನ ಅರ್ಥ ಅದಾಗಿದೆ. ∴ × ಈ ಗುರುತಿಗೆ "ಗುಣಿಲೆ" ಎಂದು ಅನ್ನುತ್ತಾರೆ. "ಸಾರೆ" ಅನ್ನುವ ಬದಲಾಗಿ "ಗುಣಿಲೆ" ಎಂದು ಅನ್ನುತ್ತಾರೆ. ಮತ್ತು ಇದಕ್ಕೆ "ಪಟ್ಟು" ಎಂದು ಕರೆಯುವ ರೂಢಿಯೂ ಉಂಟು. ೪ ಬಿ ಗುಣಿಲೆ ೫ (೪ ಬಿ. × ೫) ಅಂದರೇನೇ ೪ ಬಿರಡಿಗಳ ೫ ಪಟ್ಟು.

ವಿಶಿಷ್ಟ **ಉದಾ :** ಒಂದು ಪೆಟ್ಟಿಗೆಯಲ್ಲಿ ೮ ಖಡುಗಳಿವೆ. ಇಂಥ ಪೆಟ್ಟಿಗೆಯಲ್ಲಿರುವ ಖಡುಗಳೆಷ್ಟು ?

ಪ್ರತಿಯೊಂದರಲ್ಲಿ ೮ರಂತೆ ೪ ಪೆಟ್ಟಿಗೆಗಳಲ್ಲಿ ಖಡುಗಳಿವೆ. ಆದ್ದರಿಂದ ೮ನ್ನು ೪ ಸಾರೆ ತೆಗೆದುಕೊಳ್ಳಬೇಕಾಗುತ್ತದೆ. ಸಾರೆ ಅಂದರೇನೇ ಗುಣಿಲೆ. ∴ ಇದು ಗುಣಾಕಾರದ ಲೆಕ್ಕ.

| | |
|---|---|
| **ಬರೆಹ :** ೮ ಖಡು | **ಓದುವದು :** |
| × ೪ | ೮ ನಾಲ್ಕಲೆ ೩೨ |
| ೩೨ ಖಡು | ∴ ೩೨ **ಖಡುಗಳು ಉತ್ತರ.** |

**ಲೆಕ್ಕಗಳು**

[ (೧) ವಸ್ತುಗಳನ್ನು ಉಪಯೋಗಿಸಿ ಲೆಕ್ಕ ಮಾಡಿರಿ. (೨) ಬಾಯಿಂದ ಬಿಡಿಸಿರಿ. (೩) ಆಮೇಲೆ ಪಾಟಿಯಲ್ಲಿ ಬಿಡಿಸಿರಿ. ಈ ಮೆಟ್ಟಲುಗಳನ್ನು ಕ್ರಮದಿಂದ ಅನುಸರಿಸಿರಿ.]

(೧) ೧ ದುಡ್ಡಿಗೆ ೩ ಕಾಗದಗಳು, ಆದರೆ ೪ ದುಡ್ಡುಗಳಿಗೆಷ್ಟು ?

(೨) ಒಂದು ಪುಸ್ತಕಕ್ಕೆ ೬ ಆಣೆ, ಆದರೆ ೫ ಪುಸ್ತಕಗಳಿಗೆಷ್ಟು ?

(೩) ೧ ಆಣೆಗೆ ೫ ಅಕ್ಕಡಗಳು, ಆದರೆ ೭ ಆಣೆಗಳಿಗೆಷ್ಟು ?

(೪) ಒಂದು ದುಡ್ಡಿಗೆ ೮ ಸೂಜಿಗಳು, ಆದರೆ ೮ ದುಡ್ಡುಗಳಿಗೆಷ್ಟು ?

(೫) ಒಂದು ಸಾಲಿನಲ್ಲಿ ೧೨ ಸಸಿಗಳಿವೆ. ಆದರೆ ೯ ಸಾಲುಗಳಲ್ಲಿ ಎಷ್ಟು ?

(೬) ಒಂದು ಆಣೆಗೆ ಪೈಗಳೆಷ್ಟು ? ೨ ಆಣೆಗಳಿಗೆಷ್ಟು ?

(೭) ೭ ಆಣೆಗಳಿಗೆ ದುಡ್ಡುಗಳೆಷ್ಟು ?

(೮) ೪ ಆಣೆಗಳಿಗೆಷ್ಟು ದುಡ್ಡು ? ೧ ಪಾವಲಿಗೆಷ್ಟು ?

(೯) ೩ ರೂ.ಗಳಿಗೆ ಆಣೆಗಳೆಷ್ಟು? ೬ ರೂ.ಗಳಿಗೆ ಆಣೆಗಳೆಷ್ಟು?

(೧೦) ೧ ದುಡ್ಡಿಗೆ ೩ ಕಾಗದ, ಆದರೆ ೧ ಚವಲಿಗೆಷ್ಟು ?

(೧೧) ೧ ಆಣೆಗೆ ೩ ಪೇರಲಗಳು, ಆದರೆ ೧೦ ಆಣೆಗಳಿಗೆಷ್ಟು?

(೧೨) ಒಬ್ಬ ಶೇಠಜಿಯು ಪ್ರತಿಯೊಬ್ಬನಿಗೂ ೧ ಪೈಯಂತೆ, ೩ ಆಣೆಗಳನ್ನು ಭಿಕ್ಷುಕರಲ್ಲಿ ಹಂಚಿದನು. ಆದರೆ ಎಷ್ಟು ಜನ ಭಿಕ್ಷುಕರಿಗೆ ಭಿಕ್ಷೆ ದೊರಕಿತು ?

(೧೩) ೨ ರೂ. ೫ ಆ. = ಎಷ್ಟು ಆಣೆಗಳು ?

(೧೪) ೪ ರೂ. ಗಳ ೯ ಪಟ್ಟು ಎಷ್ಟಾಗುತ್ತದೆ ?

(೧೫) ೧೦ ರೂಪಾಯಿಗಳ ೧೦ ಪಟ್ಟು ಎಷ್ಟಾಗುತ್ತದೆ ?

(೧೬) ಗೋವಿಂದನಿಗೆ ೧೨ ಕಾಗದ ಕೊಟ್ಟೆನು. ಉಷೆಗೆ ಗೋವಿಂದನ ೩ ಪಟ್ಟು ಕಾಗದ ಕೊಟ್ಟೆನು. ಆದರೆ ಉಷೆಗೆ ದೊರೆತ ಕಾಗದಗಳೆಷ್ಟು ?

(೧೭) ಉಷೆ-ಗೋವಿಂದರಿಬ್ಬರಿಗೂ ಕೂಡಿ ದೊರೆತ ಕಾಗದ ಗಳೆಷ್ಟು ?

(೧೮) ಒಂದು ಪೆಟ್ಟಿಗೆಗೆ ೯ ರೂ. ಬೆಲೆ ಅದೆ. ಪೆಟ್ಟಿಗೆಯ ೪ ಪಟ್ಟು ಮೇಜಿಗೆ ಕೊಡಬೇಕಾಗುತ್ತದೆ. ಆದರೆ ಮೇಜಿನ ಬೆಲೆ ಎಷ್ಟು?

(೧೯) ನೀಲವ್ವನ ಹತ್ತರ ೧೫ ಹತ್ತಿಕಾಳು ಅವೆ. ಪ್ರೇಮಳ ಹತ್ತರ ಆಕೆಯ ೪ ಪಟ್ಟು ಕಾಳುಗಳಿವೆ. ಆದರೆ ಪ್ರೇಮಳ ಹತ್ತರ ಎಷ್ಟಿವೆ ?

(೨೦) ಒಂದು ಖುರ್ಚಿಗೆ ೭ ರೂ. ಬೆಲೆ. ಕಪಾಟಕ್ಕೆ ಖುರ್ಚಿಯ ೫ ಪಟ್ಟು ಬೆಲೆ ಕೊಡಬೇಕಾಗುತ್ತದೆ. ಆದರೆ ಎರಡೂ ವಸ್ತುಗಳನ್ನು ಕೊಂಡರೆ ನಾವು ಕೊಡಬೇಕಾದ ರೂಪಾಯಿಗಳೆಷ್ಟು ?

[೨]

| | | | |
|---|---|---|---|
| o | o | o | o |
| o | o | o | o |
| o | o | o | o |
| o | o | o | o |
| o | o | o | o |

ಉದ್ದನೆಯ ಪ್ರತಿಯೊಂದು ಸಾಲಿನಲ್ಲಿ ಎಷ್ಟೆಷ್ಟು ಮಣಿಗಳಿವೆ? ೪,೪ ರಂತೆ ಅವೆ. ಇಂಥ ಎಷ್ಟು ಸಾಲುಗಳಿವೆ? ೫. ಅಂದರೆ ೪ ಮಣಿಗಳನ್ನು ೫ ಸಾರೆ ತೆಗೆದುಕೊಳ್ಳಬೇಕಾಗುತ್ತದೆ. ಸಾರೆ ಅಂದರೆ ಗುಣಿಲೆ. ∴ ೪ ಮಣಿ × ೫ = ೨೦ ಮಣಿಗಳು.

ಇನ್ನು ಅಗಲದ ಪ್ರತಿಯೊಂದು ಸಾಲಿನಲ್ಲಿ ಎಷ್ಟೆಷ್ಟು ಮಣಿಗಳಿವೆ? ೫, ೫ರಂತೆ ಅವೆ. ಇಂಥ ಸಾಲುಗಳೆಷ್ಟಿವೆ? ೪. ಇಲ್ಲಿ ೫ ಮಣಿಗಳನ್ನು ೪ ಸಾರೆ ತೆಗೆದುಕೊಳ್ಳಬೇಕಾಗುತ್ತದೆ. ಸಾರೆ ಅಂದರೆ ಗುಣಿಲೆ. ∴ ೫ ಮಣಿ × ೪ = ೨೦ ಮಣಿಗಳು. ಇವೆರಡು ಗುಣಾಕಾರಗಳನ್ನು ಕೆಳಗೆ ಬಿಡಿಸಿದೆ ಅವುಗಳನ್ನು ಚೆನ್ನಾಗಿ ನಿರೀಕ್ಷಿಸಿರಿ.

| | |
|---|---|
| ೪ ಮಣಿ | ೫ ಮಣಿ |
| × ೫ | × ೪ ಮಣಿ |
| ೨೦ ಮಣಿ | ೨೦ ಮಣಿ |

ಇಲ್ಲಿ ಗುಣಾಕಾರದ ಸಂಖ್ಯೆಗಳಲ್ಲಿ ತಿರುವು ಮುರುವಾದದ್ದು ಕಂಡುಬರುತ್ತದೆ. ಆದರೂ ಉತ್ತರ ಮಾತ್ರ ಅಷ್ಟಷ್ಟೇ ಬಂದಿದೆ.

ಎರಡು ಸಂಖ್ಯೆಗಳ ಗುಣಾಕಾರ ಮಾಡುವದಿರುವಾಗ ಅವುಗಳಲ್ಲಿ ಬೇಕಾದ ಒಂದು ಸಂಖ್ಯೆಯಿಂದ ಇನ್ನೊಂದು ಸಂಖ್ಯೆಗೆ ಗುಣಿಸಿದರೆ ಬರುವ ಉತ್ತರಗಳಲ್ಲಿ ಹೆಚ್ಚುಕಡಿಮೆಯಾಗಲಾರದು.

**ವಿಶಿಷ್ಟ ಉದಾ:** ಒಂದು ಕಪಾಟಿಗೆ ೭ ರೂ. ಬೆಲೆ. ಆದರೆ ೧೩ ಕಪಾಟುಗಳಿಗೆ ಎಷ್ಟು ರೂಪಾಯಿ ಕೊಡಬೇಕಾಗುತ್ತದೆ?

ಪ್ರತಿಯೊಂದು ಕಪಾಟಿನ ಬೆಲೆ ೭ ರೂ. ಅದೆ. ೧೩ ಕಪಾಟುಗಳ ಬೆಲೆ ಅಂದರೆ ೭ನ್ನು ೧೩ ಸಾರೆ ಇಲ್ಲವೆ ೧೩ನ್ನು ೭ ಸಾರೆ ತೆಗೆದುಕೊಳ್ಳಬೇಕಾಗುತ್ತದೆ. ಸಾರೆ ಅಂದರೆ ಗುಣಿಲೆ. ಆದ್ದರಿಂದ ಇದು ಗುಣಾಕಾರದ ಲೆಕ್ಕ.

| ಬರೆಹ : | ಓದುವದು: |
|---|---|
| ೭ ರೂ.<br>×೧೩<br>೯೧ ರೂ. | ೧೩ ಏಳಲೆ ೯೧<br>∴ ೯೧ ರೂ. ಉತ್ತರ. |

## ಲೆಕ್ಕಗಳು

[ಮೊದಲು ಬಾಯಿಂದ ಬಿಡಿಸಿರಿ. ಆಮೇಲೆ ಪಾಟಿಯಲ್ಲಿ]

(೧) ೧ ಕಂಬಳಿಗೆ ೪ ರೂ. ಬೆಲೆ, ಆದರೆ ೮ ಕಂಬಳಿಗಳಿಗೆಷ್ಟು?

(೨) ೧ ರೂಪಾಯಿಗೆ ೫ ಸೇರು ಸಕ್ಕರೆ, ಆದರೆ ೧೧ ರೂಪಾಯಿಗಳಿಗೆಷ್ಟು ?

(೩) ಒಂದು ಸುತ್ತು ನೂಲು ಅಂದರೆ ೪ ಫೂಟು ಉದ್ದವಿರುತ್ತದೆ. ಆದರೆ ೧೬ ಸುತ್ತುಗಳಿಗೆ ಎಷ್ಟುದ್ದವಾಗುತ್ತದೆ?

(೪) ಒಂದು ಅಂಗಿಗೆ ೩ ವಾರ ಅರಿವೆ ಬೇಕು. ಆದರೆ ೧೨ ಅಂಗಿಗಳಿಗೆಷ್ಟು ?

(೫) ೪ ರೂ, ೬ ರೂ, ೯ ರೂ, ಪ್ರತಿಯೊಂದಕ್ಕೆ ಆಣೆಗಳು ಎಷ್ಟೆಷ್ಟು ?

(೬) ಒಂದು ಹೊರೆ ಹುಲ್ಲು ೧ ಆಕಳಿಗೆ ೨ ದಿನ ಸಾಲುತ್ತದೆ. ಆದರೆ ೧೮ ಹೊರೆಗಳು ಎಷ್ಟು ದಿನ ಸಾಲಬಹುದು ?

(೭) ೧೪ ಆಣೆಗಳಿಗೆ ದುಡ್ಡುಗಳೆಷ್ಟು ?

(೮) ೧೮ ಪೋಸ್ಟ ಕಾರ್ಡುಗಳಿಗೆ ಎಷ್ಟು ಹಣ ಕೊಡಬೇಕಾಗುತ್ತದೆ ?

(೯) ೨೪ ಸುತ್ತು ನೂಲು ಎಷ್ಟು ಫೂಟು ಉದ್ದವಿರುತ್ತದೆ?

(೧೦) ೧ ಪಂಚೇರು ಬೆಲ್ಲವೆಂದರೆ ೭ ಸೇರು. ಆದರೆ ೯ ಪಂಚೇರು ಬೆಲ್ಲದ ತೂಕ ಎಷ್ಟು ಸೇರಾಗುತ್ತದೆ ?

(೧೧) ೧ ತಿಂಗಳಿಗೆ ೫ ರೂ. ಗಳಂತೆ ೧೧ ತಿಂಗಳ ಮನೆ ಬಾಡಿಗೆ ಎಷ್ಟಾಗುತ್ತದೆ ?

(೧೨) ಒಬ್ಬ ಮುದುಕಿಯು ಮುಂಜಾನೆ ೩ ತಾಸು, ಮಧ್ಯಾಹ್ನ ೨ ತಾಸು ನೂಲುತ್ತಾಳೆ. ಇನ್ನು ೧೫ ದಿನಗಳಲ್ಲಿ ಅವಳು ಎಷ್ಟು ತಾಸು ನೂತಂತಾಯಿತು?

[೩]

**ವಿಶಿಷ್ಟ ಉದಾ:** ಒಂದು ಆಕಳ ಬೆಲೆ ೩೨ ರೂ. ಎಂದು ಗೊತ್ತುಪಡಿಸಿತು. ನಾವು ೨ ಆಕಳುಗಳನ್ನು ಕೊಂಡರೆ ಕೊಡಬೇಕಾದ ಹಣವೆಷ್ಟು?

೩೨ ರೂ. ಗಳನ್ನು ೨ ಸಾರೆ ತೆಗೆದುಕೊಳ್ಳಬೇಕಾಗುವದು. ಸಾರೆ ಅಂದರೆ ಗುಣಿಲೆ. ಆದ್ದರಿಂದ ಇದು ಗುಣಾಕಾರದ ಲೆಕ್ಕ.

೩೨×೨ ಈ ಲೆಕ್ಕವನ್ನು ಬಿಡಿಸಬೇಕಾಗಿದೆ. ಗುಣಾಕಾರ ಮಾಡುವಾಗ "೩೨ ಎರಡಲೆ" ಎಂದು ಮಗ್ಗಿಯನ್ನು ಅನ್ನಲಿಕ್ಕೆ ಬರಲಾರದು. ಯಾಕಂದರೆ ೩೨ರ ಮಗ್ಗಿ ಗೊತ್ತಿರುವದಿಲ್ಲ. ಇನ್ನು ೨ರ ಮಗ್ಗಿಯನ್ನು ೩೨ರ ವರೆಗೆ ಅಂದರೂ ಉತ್ತರ ಬರುತ್ತದೆ. ಆದರೆ ೨ರ ಮಗ್ಗಿ ೧೦ರ ಮುಂದೆ ಬರುವದಿಲ್ಲ. ಹಾಗಾದರೆ ಇಂಥ ಲೆಕ್ಕಗಳನ್ನು ಹೇಗೆ ಬಿಡಿಸಬೇಕು? ರೀತಿಯನ್ನು ಕೆಳಗೆ ವಿವರಿಸಿದೆ.

೩೨ನ್ನು ೩ ಹ. ಮತ್ತು ೨ ಬಿ. ಎಂದು ಎರಡು ಭಾಗ ಮಾಡುವಾ ೨ ಬಿಡಿ ಕಾಳುಗಳನ್ನು ೨ ಸಾರೆ ತೆಗೆದುಕೊಂಡರೆ ೪ ಬಿಡಿಕಾಳು ಆಗುತ್ತವೆ. ಆಮೇಲೆ ೩ ಹ. ೨ ಸಾರೆ ತೆಗೆದುಕೊಂಡರೆ ೬ ಹ. ಬರುತ್ತವೆ. ಒಟ್ಟಿನಲ್ಲಿ ೬ ಹ. ಮತ್ತು ೪ ಬಿ. ಆದವು. ಅಂದರೆ ೬೪. ಆದ್ದರಿಂದ ೬೪ ರೂ. ಉತ್ತರ.

**ಬರಿಹ:**

| ಹ. | ಬಿ. |
|---|---|
| ೩ | ೨ |
| × | ೨ |
| ೬ | ೪ |

**ಓದುವದು:**
(ಬಿ.) ೨ ಎರಡಲೆ ೪.
(ಹ.) ೨ ಮೂರಲೆ ೬.
∴ **೬೪ ರೂ ಉತ್ತರ.**

**ವಿಶಿಷ್ಟ ಉದಾ:** ಒಂದು ವರ್ಷಕ್ಕೆ ೨೧೩ ರೂ. ಗಳಂತೆ ಬ್ಯಾಂಕಿನಲ್ಲಿ ಇಟ್ಟರೆ ೩ ವರುಷಗಳಲ್ಲಿ ಎಷ್ಟು ಹಣ ಇಟ್ಟಂತಾಯಿತು?

೨೧೩ ರೂ. ಗಳನ್ನು ೩ ಸಾರೆ ತೆಗೆದುಕೊಳ್ಳಲಾಗಿವೆ. ಸಾರೆ ಅಂದರೆ ಗುಣಿಲೆ, ಆದ್ದರಿಂದ ಇದು ಗುಣಾಕಾರದ ಲೆಕ್ಕ.

| ಬರೆಹ : | ನೂ. | ಹ. | ಬಿ. | ಓದುವದು : |
|---|---|---|---|---|
| | ೨ | ೧ | ೩ರೂ. | (ಬಿ) ೩ ಮೂರಲೆ ೯. |
| | | × | ೩ | (ಹ.) ೩ ಒಂದಲೆ ೩. |
| | ೬ | ೩ | ೯ರೂ. | (ನೂ.) ೩ ಎರಡಲೆ ೬. |

∴ ೬೩೯ ರೂ. ಉತ್ತರ.

## ಲೆಕ್ಕಗಳು

(೧) ೧ ಪೆನ್ನಿಗೆ ೨ ರೂ. ಬೆಲೆ, ಆದರೆ ೪೩ ಪೆನ್ನುಗಳ ಬೆಲೆ ಎಷ್ಟು ?

(೨) ಒಂದು ವಾರ ಅರಿವೆಯು ಬೆಲೆ ೩ ರೂ. ಆದರೆ ೩೧ ವಾರಗಳ ಬೆಲೆ ಎಷ್ಟು ?

(೩) ಒಂದು ಗಂಟಿನಲ್ಲಿ ೨೨೧ ಪುಸ್ತಕಗಳಿವೆ. ಇಂಥ ೪ ಗಂಟುಗಳಲ್ಲಿದ್ದ ಪುಸ್ತಕಗಳೆಷ್ಟು ?

(೪) ೧ ಸರದಲ್ಲಿ ೨೧೩ ಮಣಿಗಳಿವೆ. ಆದರೆ ೩ ಸರಗಳ ಲ್ಲಿದ್ದ ಮಣಿಗಳೆಷ್ಟು ?

(೫) ೧ ರೂಪಾಯಿಗೆ ೧೧೨ ಎಲೆ ದೊರೆತರೆ ೪ ರೂ. ಗಳಿ ಗೆಷ್ಟು ದೊರೆಯುವವು ?

(೬) ೧೨೩ ಲಿಂಬೆಹಣ್ಣುಗಳಿಗೆ ೧ ರೂ. ಆದರೆ ೩ ರೂ. ಗಳಿಗೆಷ್ಟು ?

(೭) ೨೩೧ ಯಾರ್ಡುಗಳಿಗೆ ಫೂಟುಗಳೆಷ್ಟು ?

(೮) ಒಂದು ಹೊಲಿಗೆಯ ಯಂತ್ರದ ಬೆಲೆ ೪೧೨ ರೂ., ಆದರೆ ೨ ಯಂತ್ರಗಳನ್ನು ತರಿಸಿದರೆ ಎಷ್ಟು ಹಣ ಕೊಡಬೇಕಾಗುವದು ?

(೯) ೩೩ ರೂ. ಗಳ ೩ ಪಟ್ಟು ಎಷ್ಟಾಗುತ್ತದೆ ?

(೧೦) ೧೧೧ ರೂ.ಗಳಿಗೆ ಒಂದರಂತೆ ೨ ಜೋಡಿ ಕೋಣಗಳನ್ನು ಕೊಂಡರೆ ಕೊಡಬೇಕಾದ ಹಣವೆಷ್ಟು ?

(೧೧) ೩೪ ಆ. × ೨ (೧೨) ೨೨೨ ರೂ. × ೪

(೧೩) ೩೩೨ ಸೇರು × ೩ (೧೪) ೪೯೧ ಸೀರೆ × ೨

(೧೫) ೧೧೧ ಚವಲಿ × ೯ (೧೬) ೩೨೩ ಇಂಚು × ೩

(೧೭) ಪ್ರತಿಯೊಂದು ಹಗೆಯಲ್ಲಿ ೩೧೨೨ ಸೇರುಗಳಂತೆ ೩ ಹಗೆಗಳಲ್ಲಿ ಹಾಕಲಿಕ್ಕೆ ಎಷ್ಟು ಸೇರು ಜೋಳ ಬೇಕಾಗುವದು ?

(೧೮) ೬೧೨೩ × ೨ (೧೯) ೫೧೨೧ × ೪ (೨೦) ೯೩೧೨ × ೩

[೪]

**ವಿಶಿಷ್ಟ ಉದಾ:** ೧ ಸಾಯುಕಲ್ಲಿಗೆ ೮೭ ರೂ. ಬೆಲೆಯದೆ. ೮ ಸಾಯುಕಲ್ಲುಗಳನ್ನು ಕೊಂಡರೆ ಎಷ್ಟು ಹಣ ಕೊಡಬೇಕಾಗುತ್ತದೆ?

೮೭ ರೂ. ಗಳನ್ನು ೮ ಸಾರಿ ತೆಗೆದುಕೊಳ್ಳಬೇಕಾಗಿದೆ. ಆದ್ದರಿಂದ ಇದು ಗುಣಾಕಾರದ ಲೆಕ್ಕ.

೮೭ನ್ನು ೮ ಹ. ಮತ್ತು ೭ ಬಿ ಹೀಗೆ ಎರಡು ಭಾಗ ಮಾಡೋಣ.

೭ ಬಿಡಿಕಾಳು ೮ ಸಾರಿ ತೆಗೆದುಕೊಂಡರೆ ೭ ಎಂಟಲಿ ೫೬ ಬಿ. ಆಗುವವು

೮ ಹ. ನ್ನು ೮ ಸಾರಿ ತೆಗೆದುಕೊಂಡರೆ (೮ ಎಂಟಲಿ) ೬೪ ಹ. ಆಗುವವು

೬೪ ಹತ್ತರ ಗಂಟುಗಳೆಂದರೆ ೬೪೦ ಬಿಡಿಕಾಳುಗಳು.

೫೬ ಬಿಡಿಕಾಳುಗಳಲ್ಲಿ ೬೪೦ ಬಿಡಿಕಾಳುಗಳನ್ನು ಕೂಡಿಸಿದರೆ ೬೯೬ ಬಿ ಆಗುವವು. ಆದ್ದರಿಂದ ೬೯೬ ರೂ. ಉತ್ತರ.

**ಬರೆಹ :**

| | |
|---|---|
| ೮ ೭ ರೂ. | **ವಿವರ:** |
| × ೮ | ೭ ಬಿಡಿಕಾಳು ೮ ಸಾರಿ |
| ೫೬ | ೮ ಹತ್ತರ ಗಂಟು ೮ ಸಾರಿ |
| + ೬೪ | |
| ೬೯೬ ರೂ. | ೮೭ ರೂ ೮ ಸಾರಿ |

ಇದೇ ಲೆಕ್ಕವನ್ನು ಸ್ವಲ್ಪದರಲ್ಲಿ ಕೆಳಗಿನಂತೆ ಬಿಡಿಸುತ್ತಾರೆ.

**ಬರೆಹ:**

ೆ೮೭ ರೂ.

×೮

೬೯೬ ರೂ.

∴ ೬೯೬ ರೂ. ಉತ್ತರ.

**ಓದುವದು :**

೮ ಏಳಲಿ ೫೬ ಬಿ ೫೬ಕ್ಕೆ ೬ (ಬಿ)ಕೈಲ ೫ ಹತ್ತರ ಗಂಟುಗಳು ೮ ಎಂಟಲಿ ೬೪ ಹ ೬೪ ಮತ್ತು ೫ (ಕೈಲಿ) ಕೂಡಿದರೆ ೬೯. ೬೯ಕ್ಕೆ ೯ ಹ. ಕೈಲಿ ೬ (ನೂ) ೬ಕ್ಕೆ ೬.

ಲೆಕ್ಕಗಳು

(೧) ೭೬ ರೂ. ಗಳಿಗೆ ಒಂದರಂತೆ ೪ ಚೀಲ ಗೋಧಿಯನ್ನು ಮಾರಿದರೆ ನಮಗೆ ದೊರೆಯುವ ಹಣವೆಷ್ಟು ?

(೨) ಒಂದು ಕಬ್ಬಿಣದ ಕೊಡಕ್ಕೆ ೮ ರೂ. ಗಳಂತೆ ೯೩ ಕೊಡಗಳಿಗೆ ಕೊಡಬೇಕಾದ ಹಣವೆಷ್ಟು ?

(೩) ೭ ರೂ. ಗಳಿಗೆ ೧ ಬೆಲ್ಲದ ಪೆಂಟೆ ದೊರೆಯುತ್ತದೆ. ಇಂಥ ೫೮ ಪೆಂಟೆಗಳಿಗೆ ಎಷ್ಟು ಬೆಲೆ ಬೀಳುತ್ತದೆ?

(೪) ಒಂದು ಕುರಿಗೆ ೬ ರೂ ಗಳಂತೆ ೯೩ ಕುರಿಗಳ ಬೆಲೆ ಎಷ್ಟು?

(೫) ೧ ರೂಪಾಯಿಗೆ ೭೪ ಮಾವುಗಳಾದರೆ ೯ ರೂಪಾಯಿಗೆಷ್ಟು?

(೬) ಪ್ರತಿಯೊಂದು ಗಿಡದಲ್ಲಿ ೧೭೪ ತೆಂಗುಗಳಂತೆ ೧೨ ಗಿಡಗಳಿಂದ ನಮಗೆ ದೊರೆಯುವ ತೆಂಗುಗಳೆಷ್ಟು ?

(೭) ೧ ಗಾದಿಗೆ ೮ ರೂ. ಆದರೆ ೧೨೮ ಗಾದಿಗಳಿಗೆಷ್ಟು ?

(೮) ಒಬ್ಬ ಉಪ್ಪಾರನು ದಿನದಲ್ಲಿ ೧೭೫ ಹೆಂಟೆಗಳನ್ನು ತಯಾರಿಸುತ್ತಾನೆ. ಆದರೆ ೧೧ ಜನರು ಎಷ್ಟು ಹೆಂಟೆಗಳನ್ನು ತಯಾರಿಸುತ್ತಾರೆ ?

(೯) ಒಬ್ಬ ಹುಡುಗನಿಗೆ ೧೪ ರೂ, ಗಳಂತೆ ೨೩೪ ಹುಡುಗರ ಬೋರ್ಡಿಂಗಿನ ವೆಚ್ಚವೆಷ್ಟು ?

(೧೦) ತಿಂಗಳಿಗೆ ೧೮೨ ರೂ, ಗಳಂತೆ ಒಂದು ವರುಷದ ಸಂಬಳವೆಷ್ಟು ?

(೧೧) ಒಂದು ಬುಟ್ಟಿಯಲ್ಲಿ ೧೫೮ ಹಣ್ಣುಗಳಂತೆ ೯ ಬುಟ್ಟಿಗಳಲ್ಲಿದ್ದ ಹಣ್ಣುಗಳೆಷ್ಟು ?

(೧೨) ಒಂದು ಊರಲ್ಲಿ ೨೩೬ ಮನೆಗಳಿವೆ. ಇನ್ನೊಂದು ಊರಲ್ಲಿ ಈ ಊರಿನ ೩ ಪಟ್ಟು ಮನೆಗಳಿವೆ. ಆದರೆ ಎರಡನೆಯ ಊರಲ್ಲಿದ್ದ ಮನೆಗಳೆಷ್ಟು? ಮತ್ತು ಎರಡೂ ಊರುಗಳಲ್ಲಿದ್ದ ಮನೆಗಳೆಷ್ಟು?

(೧೩) ೧೪೬೮ ರೂ, ಗಳ ೮ ಪಟ್ಟು ಎಷ್ಟಾಗುತ್ತದೆ?

(೧೪) ೪೩೬ ಸೇರಿಲ × ೬ = ? (೧೫) ೨೯೭೫ ಮುಡ್ಡು × ೭ = ?

(೧೬) ೮೯೧ ಹಣಿಗೆ × ೧೧ = (೧೭) ೩೫೧೪ ರೂ. × ೧೩ =

(೧೮) ೫ಸೇ × ೧೩೫ (೧೯) ೬ ತಿಂಗಳು × ೧೪೩

(೨೦) ೮ ತಕಲಿ × ೪೭೧ (೨೧) ೩ ಫ್ರೂಟು × ೮೪೭

(೨೨) ೯ × ೨೧೪ (೨೩) ೪೪೯ × ೧೨

(ಕೆಳಗಿನ ಗುಣಾಕಾರದ ಲೆಕ್ಕಗಳನ್ನು ನಿರೀಕ್ಷಿಸಿರಿ.)

೨ ರೂ. × ೧೦ = ೨೦ ಇಲ್ಲವೆ ೨ ಹತ್ತರಗಂಟು ರೂಪಾಯಿಗಳು.

೪ ರೂ. × ೧೦ = ೪೦ ಇಲ್ಲವೆ ೪ ಹತ್ತರಗಂಟು ರೂಪಾಯಿಗಳು.

ಮೇಲಿನ ಲೆಕ್ಕಗಳಿಂದ ಕಂಡುಬರುವದೇನಂದರೆ ಯಾವದೊಂದು ಸಂಖ್ಯೆಗೆ ೧೦ ರಿಂದ ಗುಣಿಸಿದರೆ ಗುಣಾಕಾರದಲ್ಲಿ ಆ ಸಂಖ್ಯೆಯಷ್ಟೇ ಹತ್ತರ ಗಂಟುಗಳು ಬರುತ್ತವೆ. ಆದುದರಿಂದ ಆ ಸಂಖ್ಯೆಯ ಬಲಕ್ಕೆ (ಅಂದರೆ ಬಿಡಿಕಾಳ ಜಾಗೆಯಲ್ಲಿ) ಶೂನ್ಯವಿಟ್ಟರೆ ಉತ್ತರ ಬರುತ್ತದೆ. ಇನ್ನು-

೩ರೂ. × ೨೦ = ೬೦ ಇಲ್ಲವೆ ೬ ಹತ್ತರಗಂಟು ರೂಪಾಯಿಗಳು,

೪ರೂ. × ೨೦ = ೮೦ ಇಲ್ಲವೆ ೮ ಹತ್ತರಗಂಟು ರೂಪಾಯಿಗಳು,

ಈ ಲೆಕ್ಕಗಳಿಂದ ತಿಳಿಯುವದೇನಂದರೆ— ಯಾವದೊಂದು ಸಂಖ್ಯೆಗೆ ೨೦ ಗುಣಿಸುವದಿದ್ದಾಗ ಆ ಸಂಖ್ಯೆಗೆ ೨ರಿಂದ ಗುಣಿಸಿ ಬಂದ ಗುಣಾಕಾರದ ಬಲಬದಿಗೆ ೦ ಇಟ್ಟರೆ ಉತ್ತರ ಬರುತ್ತದೆ.

**ವಿಶಿಷ್ಟ ಉದಾ :** ಒಂದು ಕೊಡಕ್ಕೆ ೧೮ ರೂ. ಬೆಲೆ, ಆದರೆ ೩೦ ಕೊಡಗಳ ಬೆಲೆ ಎಷ್ಟಾಗುತ್ತದೆ?

ಇದು ಗುಣಾಕಾರದ ಲೆಕ್ಕ. (ಏಕೆ?)

ಬರಿಹ: ೧೮ ರೂ.
× ೩೦
———
೫೪೦ ರೂ.

ಓದುವದು: ೧೮ಕ್ಕೆ ೩ರಿಂದ ಗುಣಿಸಲು ೫೪ ಹತ್ತರ ಗಂಟುಗಳು ಬರುವವು. ಆದ್ದರಿಂದ ಬಿಡಿಕಾಳ ಜಾಗೆಯಲ್ಲಿ ೦ ಇಟ್ಟಿತು. ಹತ್ತರ ಗಂಟಿನ ಜಾಗೆಯಲ್ಲಿ ೪ ಮತ್ತು ನೂರರ ಗಂಟಿನ ಜಾಗೆಯಲ್ಲಿ ೫ ಇಟ್ಟಿತು.

∴ **೫೪೦ ರೂ. ಉತ್ತರ.**

ಮೇಲಿನ ಲೆಕ್ಕಗಳಿಂದ ಕಲಿತ ಮಾತೇನೆಂದರೆ:- ಯಾವದೊಂದು ಸಂಖ್ಯೆಯ ಮುಂದೆ ೦ ಇಟ್ಟರೆ ೧೦ರಿಂದ ಗುಣಿಸಿದಂತೆಯೂ, ೨ರಿಂದ ಗುಣಿಸಿ ಬಲಕ್ಕೆ ೦ ಇಟ್ಟರೆ ೨೦ರಿಂದ ಗುಣಿಸಿದಂತೆಯೂ, ೩ರಿಂದ ಗುಣಿಸಿ ಬಲಕ್ಕೆ ೦ ಇಟ್ಟರೆ ೩೦ರಿಂದ ಗುಣಿಸಿದಂತೆ ಆಗುತ್ತವೆ. ಆದ್ದರಿಂದ—

[ಅ] ೪೦ರಿಂದ ಗುಣಿಸುವದಿದ್ದಾಗ ೪ರಿಂದ ಗುಣಿಸಿ ಬಂದ ಗುಣಾಕಾರದ ಬಲಕ್ಕೆ ೦ ಇಡಬೇಕು.

[ಬ] ೫೦ರಿಂದ ಗುಣಿಸುವದಿದ್ದಾಗ ೫ರಿಂದ ಗುಣಿಸಿಬಂದ ಗುಣಾಕಾರದ ಬಲಕ್ಕೆ ೦ ಇಡಬೇಕು.

[ಕ] ೬೦ರಿಂದ ಗುಣಿಸುವದಿದ್ದಾಗ ೬ರಿಂದ ಗುಣಿಸಿ ಬಂದ ಗುಣಾಕಾರದ ಬಲಕ್ಕೆ ೦ ಇಡಬೇಕು. ಇತ್ಯಾದಿ.

**ಲೆಕ್ಕಗಳು** (ಬಾ: ೧ರಿಂದ ೮)

(೧) ೫ × ೨೦ (೨) ೬ × ೩೦ (೩) ೧೨ × ೧೦

(೪) ೧೬ × ೪೦ (೫) ೭ × ೬೦ (೬) ೯ × ೯೦

(೭) ೫ × ೩೦ (೮) ೮ × ೫೦

(೯) ಮುಂದಿನ ಲೆಕ್ಕಗಳಲ್ಲಿ ಬಿಟ್ಟ ಸ್ಥಳವನ್ನು ತುಂಬಿರಿ.

[ಅ] ೧ ಕೊಡೆಗೆ ೧೦ ರೂ. ಗಳಂತೆ ೮ ಕೊಡೆಗಳಿಗೆ ...ರೂ. ಗಳನ್ನು ಕೊಡಬೇಕಾಗುತ್ತದೆ.

[ಆ] ಒಂದು ತುಪ್ಪದ ಡಬ್ಬಿಯ ಬೆಲೆ ೨೦ ರೂ. ಆದ್ದರಿಂದ ೨೮ ತುಪ್ಪದ ಡಬ್ಬಿಗಳ ಬೆಲೆ .......ರೂ. ಆಗುತ್ತದೆ.

[ಇ] ಒಂದು ಶಾಲೆಯಲ್ಲಿ ೫ ವರಗಳಿದ್ದು ಪ

ರಂತೆ ಹುಡುಗರಿದ್ದಾರೆ. ಆದ್ದರಿಂದ ಶಾಲೆಯಲ್ಲಿ........ಹುಡುಗರು ಕಲಿಯುತ್ತಿದ್ದಾರೆ.

(೧೦) ೧ ಎಮ್ಮೆಗೆ ೬೦ ರೂ. ಬೆಲೆ. ನಾವು ೧೭ ಎಮ್ಮೆಗಳನ್ನು ಕೊಂಡರೆ ಎಷ್ಟು ಹಣ ಕೊಡಬೇಕಾಗುತ್ತದೆ ?

(೧೧) ೧ ಮೇಜು ತಯಾರಿಸಲಿಕ್ಕೆ ೨೦ ರೂ. ವೆಚ್ಚ ಬರುವದು. ಆದರೆ ೪೫ ಮೇಜು ತಯಾರಿಸಲಿಕ್ಕೆ ಎಷ್ಟು ವೆಚ್ಚ ಬರುವದು ?

(೧೨) ೧ ಆಕಳನ್ನು ಕೊಳ್ಳಲು ೪೮ ರೂ. ಕೊಡಬೇಕಾಗುತ್ತದೆ. ಆದರೆ ೩೦ ಆಕಳುಗಳನ್ನು ಕೊಂಡರೆ ಕೊಡಬೇಕಾದ ಹಣವೆಷ್ಟು?

(೧೩) ಒಂದು ಎತ್ತಿಗೆ ೮೦ ರೂ. ಗಳಂತೆ, ೪ ಜೋಡಿ ಎತ್ತುಗಳನ್ನು ಕೊಂಡರೆ ಎಷ್ಟು ಹಣ ಕೊಡಬೇಕಾಗುವದು ?

(೧೪) ರೂಪಾಯಿಗೆ ೬೪ ದುಡ್ಡು. ಆದರೆ ೧೦ ರೂ. ಗಳಿಗೆಷ್ಟು ?

(೧೫) ೭೨ ರೂಪಾಯಿಗಳಿಗೆ ಆಣೆಗಳೆಷ್ಟು ?

(೧೬) ನೋಟುಗಳು: ೭೦ × ೨೬೫ = ?

(೧೭) ನಾಯಿಕಲ್ಲುಗಳು: ೯೦ × ೧೩೯೫ = ?

## [೬]

## ಮಗ್ಗಗಳ ರಚನೆ

ಮೊದಲನೆಯ ವರ್ಗದಲ್ಲಿ ೧೦ರ ವರೆಗೆ ಮಗ್ಗಗಳನ್ನು ರಚಿಸಿ ಬಾಯಿಪಾಠ ಮಾಡಿರುವಿರಿ. ಅದೇ ರೀತಿ ಬೇಕಾದ ಸಂಖ್ಯೆಯನ್ನು ೨ರಿಂದ ೧೦೦ ವರೆಗೆ ಗುಣಿಸಿ ಮಗ್ಗಗಳನ್ನು ತಯಾರಿಸಲಿಕ್ಕೆ ಬರುತ್ತದೆ. **ಮಗ್ಗಿಗಳು ಗುಣಾಕಾರಗಳೇ ಆಗಿವೆ.** ೧೨ರ ಮಗ್ಗಿ ಕೆಳಗಿನಂತಿವೆ—

| | | | |
|---|---|---|---|
| ೧೨ ಎರಡಲೆ | ೨೪ | ೧೨ ಏಳಲೆ | ೮೪ |
| ೧೨ ಮೂರಲೆ | ೩೬ | ೧೨ ಎಂಟಲೆ | ೯೬ |
| ೧೨ ನಾಲ್ಕಲೆ | ೪೮ | ೧೨ ಒಂಭತ್ತಲೆ | ೧೦೮ |
| ೧೨ ಐದಲೆ | ೬೦ | ೧೨ ಹತ್ತಲೆ | ೧೨೦ |
| ೧೨ ಆರಲೆ | ೭೨ | | |

೧ ಆಣೆಗೆ ೧೨ ಪೈಗಳು. ಆದರೆ ೧೬ ಆಣೆಗಳಿಗೆ ಎಷ್ಟು ಎಂಬು

ಕೇಳಿದರೆ ೧೨ರ ಮಗ್ಗಿಯನ್ನು ೧೬ರ ವರೆಗೆ ಅನ್ನಬೇಕಾಗುವದು. ಅಂದರೆ ಮುಂದಿನ ರಚನೆಯನ್ನು ತಿಳಿದುಕೊಂಡಿರಬೇಕಾಗುವದು. ೧೨ರ ಮಗ್ಗಿ ೧೬ರ ವರೆಗೆ ಗೊತ್ತಾಗಬೇಕಾದರೆ ೧೨೦ರಲ್ಲಿ ೧೨, ೨೪, ೩೬. ೪೮ ಈ ಕ್ರಮದಿಂದ ಕೂಡಿಸುತ್ತ ಹೋದರೆ ಕೆಳಗಿನಂತೆ ರಚನೆಯಾಗುವದು.

| | | | | | |
|---|---|---|---|---|---|
| ೧೨ | ಹನ್ನೊಂದಲೆ | ೧೩೨ | ೧೨ | ಹದಿನಾಲ್ಕಲೆ | ೧೬೮ |
| ೧೨ | ಹನ್ನೆರಡಲೆ | ೧೪೪ | ೧೨ | ಹದಿನೈದಲೆ | ೧೮೦ |
| ೧೨ | ಹದಿಮೂರಲೆ | ೧೫೬ | ೧೨ | ಹದಿನಾರಲೆ | ೧೯೨ |

ಇದೇ ರೀತಿ ೧೬ಕ್ಕೆ ೨, ೩, ೪, ಮುಂತಾದ ಸಂಖ್ಯೆಗಳಿಂದ ಗುಣಿಸಿ ೧೬ರ ಮಗ್ಗಿಯನ್ನು ಕೆಳಗಿನಂತೆ ರಚಿಸಲಿಕ್ಕೆ ಬರುವದು.

| | | | | | |
|---|---|---|---|---|---|
| ೧೬ | ಎರಡಲೆ | ೩೨ | ೧೬ | ಏಳಲೆ | ೧೧೨ |
| ೧೬ | ಮೂರಲೆ | ೪೮ | ೧೬ | ಎಂಟಲೆ | ೧೨೮ |
| ೧೬ | ನಾಲ್ಕಲೆ | ೬೪ | ೧೬ | ಒಂಭತ್ತಲೆ | ೧೪೪ |
| ೧೬ | ಐದಲೆ | ೮೦ | ೧೬ | ಹತ್ತಲೆ | ೧೬೦ |
| ೧೬ | ಆರಲೆ | ೯೬ | | | |

ಮೇಲಿನ ಕ್ರಮದಂತೆ ೨ರಿಂದ ೧೦ರ ವರೆಗೆ ಗುಣಿಸಿ ಬೇಕಾದ ಸಂಖ್ಯೆಯ ಮಗ್ಗಿಯನ್ನು ರಚಿಸಬಹುದು.

**ಲೆಕ್ಕಗಳು**

(೧) ಒಂದು ಸಾಲಿನಲ್ಲಿ ೧೬ ಮಗ್ಗಗಳಿವೆ. ಆದರೆ ೪ ಸಾಲುಗಳಲ್ಲಿರುವ ಮಗ್ಗಗಳೆಷ್ಟು ?

(೨) ಒಂದು ಪೆಟ್ಟಿಗೆಗೆ ೧೪ ರೂ.ಗಳಂತೆ ೧೨ ಪೆಟ್ಟಿಗೆಗಳ ಬೆಲೆ ಎಷ್ಟು ?

(೩) ೮ ರೂ. ಗಳಿಗೆ ಆಣೆಗಳೆಷ್ಟು ?

(೪) ಒಂದು ಹಣಿಗೆಯಲ್ಲಿ ೧೬ ಬಾಳೆಹಣ್ಣುಗಳಿವೆ. ಆದರೆ ಇಂಥ ೮ ಹಣಿಗೆಗಳಲ್ಲಿರುವ ಬಾಳೆಹಣ್ಣುಗಳೆಷ್ಟು ?

(೫) ೨ ರೂ. ೩ ಆ. = ಆಣೆಗಳೆಷ್ಟು ?

(೬) ೪ರೂ. ೬ ಆ.= ಆಣೆಗಳೆಷ್ಟು ?

(೭) ನಮ್ಮ ಹಿತ್ತಲಲ್ಲಿ ಕೆಳಗಿನಂತೆ ಸಸಿಗಳನ್ನು ನೆಡಬೇಕಾಗಿದೆ:

[೧] ○ ○ ○ ○ ○ ○ ○ ○ ○ ○ ○ ○
[೨]
[೩]
[೪]
[೫]
[೬]

ಬದಿಯಲ್ಲಿ ಕೊಟ್ಟಂತೆ ಸಸಿಗಳ ೬ ಸಾಲುಗಳಿದ್ದು ಅದೇ ಕ್ರಮದಂತೆ ನೆಡಬೇಕಾಗಿದೆ. ಆದರೆ ಹಾಗೆ ನೆಡಲಿಕ್ಕೆ ನಮಗೆ ಎಷ್ಟು ಸಸಿಗಳು ಬೇಕಾಗುತ್ತವೆ?

(೮) ೫ ಫೂ. ಉದ್ದವಿದ್ದ ದಾರದಲ್ಲಿ ಇಂಚಿನ ತುಂಡುಗಳು ಎಷ್ಟು ಆಗುವವು ?

(೯) ೮ ಆಣೆಗಳಿಗೆ ಪೈಗಳೆಷ್ಟು ?

(೧೦) ಪ್ರತಿಯೊಂದು ಖುರ್ಚಿಗೆ ೧೪ ರೂ., ಆದರೆ ೯ ಖುರ್ಚಿಗಳ ಬೆಲೆ ಎಷ್ಟಾಗುತ್ತದೆ ?

(೧೧) ಜರದ ಖಣ, ಸೀರೆ, ಧೋತರ ಜೋಡಿ ಇವುಗಳ ಬೆಲೆ ಕ್ರಮದಿಂದ ೧೦ ರೂ, ೧೬ ರೂ., ೧೨ ರೂ. ಇದೆ. ನಾವು ೪ ಖಣ, ೬ ಸೀರೆ, ೫ ಧೋತರ ಜೋಡಿಗಳನ್ನು ಮಾರಿದೆವು. ಈ ವ್ಯಾಪಾರದಿಂದ ನಮಗೆ ದೊರೆತ ಹಣವೆಷ್ಟು ?

[೭]

## ಗಡಿಯಾರ

**ಗಡಿಯಾರದ ಪರಿಚಯ:** ಗಡಿಯಾರವು ವೇಳೆಯನ್ನು ತಿಳಿಸುತ್ತದೆ. ವೇಳೆಯ ಸದುಪಯೋಗ ಮಾಡಿಕೊಳ್ಳಲೆಂದು ಯಾವಾಗಲೂ "ಟಿಕ್-ಟಿಕ್" ಎಂದು ಜನರನ್ನು ಬೋಧಿಸುತ್ತದೆ ! ನಾವು ಮಲಗಿದಾಗ ನಮ್ಮ ಇಚ್ಛೆಯಂತೆ ನಿಯಮಿತ ವೇಳೆಗೆ ಗಂಟೆ ಬಾರಿಸಿ ನಮ್ಮನ್ನು ಎಚ್ಚರಿಸುತ್ತದೆ. ಅಂತೆಯೇ ಇಂದು ಪ್ರತಿಯೊಬ್ಬನಿಗೂ ಗಡಿಯಾರ ಬೇಕಾಗಿದೆ. ಅವಶ್ಯವಾಗಿ ಬೇಕಾಗಿದೆ !

ಗಡಿಯಾರ ನೋಡಿದ ಕೂಡಲೇ ತಟ್ಟನೆ ಕಾಣಬರುವ ಸಂಗತಿಗಳೆಂದರೆ ೧೨ ಅಂಕಿಗಳು ಹಾಗೂ ೨ ಮುಳ್ಳುಗಳು. (ಚಿತ್ರ ನೋಡಿರಿ.) ಮುಳ್ಳುಗಳಲ್ಲಿ ಒಂದು ಉದ್ದವಿದ್ದರೆ ಇನ್ನೊಂದು ಗಿಡ್ಡ ಇರುತ್ತದೆ. ವರ್ತುಲದಲ್ಲಿ ೧೨ ದೊಡ್ಡ ಭಾಗ

ಗಳಿದ್ದು ಅವುಗಳಿಗೆ ಅಂಕಿಗಳನ್ನು ಬರೆದಿರುತ್ತಾರೆ. ಫೂಟಪಟ್ಟಿಯ ಮೇಲಿನ ಅಂಕಿಗಳನ್ನು ಬಲ್ಲಿರಿ. ಹಾಗಾದರೆ ಇವುಗಳನ್ನು ಓದೀ ನೋಡುವಾ. ೧ರಿಂದ ೧೨ರ ವರೆಗೆ ಅಂಕಿಗಳಿವೆ, ಸರಿ. ಪ್ರತಿಯೊಂದು ದೊಡ್ಡ ಭಾಗದಲ್ಲಿ ಮತ್ತೆ ಸಣ್ಣ ಸಣ್ಣ ೫ ಭಾಗಗಳಿವೆ. ಇನ್ನೊಂದು ದೊಡ್ಡ ಭಾಗದಲ್ಲಿ ಎಷ್ಟಿವೆ? ೫. ಸರಿ. ಈ ರೀತಿ ೧೨ ಭಾಗಗಳಲ್ಲಿ ಕೂಡಿ ೬೦ ಸಣ್ಣ ಭಾಗಗಳಿವೆ. ದೊಡ್ಡ ಮುಳ್ಳು ೧ ಸಣ್ಣ ಭಾಗ ವನ್ನು ಕ್ರಮಿಸಲಿಕ್ಕೆ ಹಿಡಿಯುವಷ್ಟು ವೇಳೆಗೆ ೧ **ಮಿನಿಟು** ಅನ್ನು ತ್ತಾರೆ. ದೊಡ್ಡ ಮುಳ್ಳು ೧೨ರಿಂದ ಹೊರಟು ಒಂದು ಪೂರ್ಣ ಸುತ್ತು ಹಾಕಿ ಮತ್ತೆ ೧೨ಕ್ಕೆ (೬೦ ಸಣ್ಣ ಭಾಗಗಳನ್ನು ಕ್ರಮಿಸಿ) ಬರುವಷ್ಟರಲ್ಲಿ ಗಿಡ್ಡ ಮುಳ್ಳು ಒಂದು ಅಂಕಿಯಿಂದ ಅದರ ಮುಂದಿನ ಇನ್ನೊಂದು ಅಂಕಿಗೆ ಸರಿದಿರುತ್ತದೆ. ಅಂದರೆ ಒಂದು ದೊಡ್ಡ ಭಾಗ ವನ್ನು ಕ್ರಮಿಸಿರುತ್ತದೆ. ಹೀಗೆ ಕ್ರಮಿಸಲಿಕ್ಕೆ ಹಿಡಿದ ವೇಳೆಗೆ ೧ **ತಾಸು** ಅನ್ನುತ್ತಾರೆ. ದೊಡ್ಡ ಮುಳ್ಳು ೬೦ ಸಣ್ಣ ಭಾಗಗಳನ್ನು ಕ್ರಮಿಸುವಷ್ಟರಲ್ಲಿ ಗಿಡ್ಡ ಮುಳ್ಳು ೧ ದೊಡ್ಡ ಭಾಗ ಕ್ರಮಿಸುವದು.

**∴ ೬೦ ಮಿನಿಟುಗಳು = ೧ ತಾಸು.**

ಉದ್ದನೆಯ ಮುಳ್ಳಿಗೆ **ಮಿನಿಟಿನ ಮುಳ್ಳು** ಎಂದೂ, ಗಿಡ್ಡ ಮುಳ್ಳಿಗೆ **ತಾಸಿನ ಮುಳ್ಳು** ಎಂದೂ ಕರೆಯುತ್ತಾರೆ.

ಇಡಿಯ ದಿನದಲ್ಲಿ ತಾಸಿನ ಮುಳ್ಳು ವರ್ತುಲವನ್ನು ೨ ಸಾರೆ ಸುತ್ತು ಹಾಕುತ್ತದೆ. ಪ್ರತಿಯೊಂದು ಸರತಿಗೆ ೧೨ರಂತೆ ೨೪ ದೊಡ್ಡ ಭಾಗಗಳನ್ನು ಕ್ರಮಿಸಿದಂತಾಯಿತು. ಆದ್ದರಿಂದ ದಿನಕ್ಕೆ ತಾಸು ಗಳೆಷ್ಟಾಗುವವು? ೨೪. ಹೌದು.

**∴ ೨೪ ತಾಸುಗಳು = ೧ ದಿವಸ.**

**ಗಡಿಯಾರದಿಂದ ವೇಳೆಯನ್ನು ತಿಳಿದುಕೊಳ್ಳುವದು:** ತಾಸಿನ ಮುಳ್ಳು ಯಾವ ಅಂಕಿಯ ಮೇಲಿರುವದೋ ಅಷ್ಟು ಗಂಟೆ ಯಾಯಿತೆಂದು ತಿಳಿಯಬೇಕು. ಮತ್ತು ಆ ಕಾಲಕ್ಕೆ ಮಿನಿಟಿನ ಮುಳ್ಳು, ೧೨ರ ಮೇಲೆ ಇರುತ್ತದೆ. ಮುಂದಿನ ಗಡಿಯಾರದ ಚಿತ್ರ,







ನೋಡಿರಿ. ತಾಸಿನ ಮುಳ್ಳು ೭ರ ಮೇಲಿದೆ. ಮಿನಿಟಿನ ಮುಳ್ಳು ೧೨ರ ಮೇಲಿದೆ. ಈಗ “ ಏಳು ಗಂಟೆ” ಆಗಿದೆಯೆಂದು ಹೇಳುತ್ತಾರೆ. ಕೆಳಗಿನ ಚಿತ್ರದಲ್ಲಿ ತಾ. ಮುಳ್ಳು ೫ರ ಮೇಲೆ, ಮಿ. ಮುಳ್ಳು ೧೨ರ ಮೇಲೆ ಇರುತ್ತದೆ. ಇದು ಗಂಟೆ ಎಷ್ಟಾಗಿದೆಯೆಂದು ಸೂಚಿಸುವದು ? ೫ ಗಂಟೆ. ಇನ್ನು ಕೆಳಗಿನ ಚಿತ್ರಗಳನ್ನು ನಿರೀಕ್ಷಿಸಿರಿ.

ತಾಸಿನ ಮುಳ್ಳು ೧೦ನ್ನು ದಾಟಿದೆ. ಮತ್ತು ಮಿನಿಟಿನ ಮುಳ್ಳು ೩ರ ಮೇಲಿದೆ. ೧೨ರಿಂದ ೩ರ ವರೆಗೆ ಮಿನಿಟು ಭಾಗಗಳೆಷ್ಟು ಇರುವವು? ೧೫. ಆದ್ದರಿಂದ ಈಗ **೧೦ ಗಂಟೆಯಾಗಿ ೧೫ ಮಿನಿಟು** ಆಗಿರುತ್ತದೆ.

**ನೆನಪಿಡಿರಿ:** ೧೨ರಿಂದ ಮುಂದೆ ಮಿನಿಟು ಮುಳ್ಳಿದ್ದ ವಿಭಾಗದ ವರೆಗೆ ಎಣಿಸಿ ಎಷ್ಟು ಮಿನಿಟಾಗಿದೆಯೆಂಬುದನ್ನು ಹೇಳುವರು.



ಬದಿಯ ಚಿತ್ರ ನೋಡಿರಿ. ತಾಸಿನ ಮುಳ್ಳು ೮ನ್ನು ದಾಟಿದೆ. ಮತ್ತು ಮಿನಿಟಿನ ಮುಳ್ಳು ೫ರ ಮೇಲಿದೆ. ಅಂದರೆ ಈಗ ಎಷ್ಟು ವೇಳೆಯಾಗಿರಬಹುದು ? ೮ ಗಂಟೆ ೨೫ ಮಿನಿಟು.

ರವಿವಾರದಿಂದ ಶನಿವಾರದ ವರೆಗೆ ೭ ದಿನಗಳಾಗುವವು. ಈ ಏಳು ದಿನಗಳಿಗೆ ಕೂಡಿ ೧ **ವಾರ** ಅನ್ನುತ್ತಾರೆ.




∴ **೭ ದಿನಗಳು = ೧ ವಾರ.**

೪ ವಾರಗಳಿಗೆ ತಿಂಗಳೆಂದು ಕರೆಯುವ ರೂಢಿಯುಂಟು. ಭಾರತೀಯರು ತಿಂಗಳುಗಳಿಗೆ ೩೦ ದಿನಗಳನ್ನು ಹಿಡಿಯುತ್ತಾರೆ. ವರುಷಕ್ಕೆ ೧೨ ತಿಂಗಳು. ಆದ್ದರಿಂದ

ಭಾರತೀಯರ ಎಣಿಕೆಯಂತೆ ವರುಷಕ್ಕೆ ದಿನಗಳೆಷ್ಟು? ೩೬೦ ದಿ. ಸರಿ. ಚೈತ್ರದಿಂದಲೇ ಹೊಸ ವರುಷ ಪ್ರಾರಂಭಿಸುವರು.




ಪಾಶ್ಚಿಮಾತ್ಯರು ವರುಷಕ್ಕೆ ೧೨ ತಿಂಗಳುಗಳನ್ನು ಹಿಡಿದರೂ ಅವರು ವರುಷಕ್ಕೆ ೩೬೫ ದಿನಗಳನ್ನು ಹಿಡಿಯುತ್ತಾರೆ. ಪ್ರತಿ ತಿಂಗಳಿಗೆ ಎಷ್ಟೆಷ್ಟು ದಿನಗಳೆಂಬುದನ್ನು ಬದಿಯ ಚಿತ್ರದಲ್ಲಿ ಬರೆದಿದೆ. ಅವರು ಜಾನೇವರಿಯಿಂದ ನೂತನ ವರುಷ ಪ್ರಾರಂಭಿಸುವರು. (ಶಿಕ್ಷಕರು ಮಕ್ಕಳಿಗೆ ಲೀಪ ವರುಷ-ಅಧಿಕಮಾಸಗಳ ಬಗ್ಗೆ ತುಸು ಸಂಗತಿಯನ್ನು ವಿವರಿಸಬೇಕು.)

**ಲೆಕ್ಕಗಳು**

ವೇಳೆ ಎಷ್ಟಾಗಿದೆಯೆಂಬುದನ್ನು ಹೇಳಿರಿ.

(೧) 

(೨) 

(೩) 

(೪) 

ತಾಸಿನ ಮುಳ್ಳು ೬ರ ಮೇಲೆ, ಮಿನಿಟಿನ ಮುಳ್ಳು ೧೨ರ ಮೇಲೆ ಇವೆ.

(೬) ತಾಸಿನ ಮುಳ್ಳು ೯ರ ಮೇಲೆ, ಮಿನಿಟಿನ ಮುಳ್ಳು ೧೨ರ ಮೇಲೆ ಇವೆ.

(೭) ತಾಸಿನ ಮುಳ್ಳು ೩ನ್ನು ದಾಟಿದೆ. ಮಿನಿಟಿನ ಮುಳ್ಳು ೧೪ನೇ ಸಣ್ಣ ಭಾಗದಲ್ಲಿದೆ.

(೮) ತಾಸಿನ ಮುಳ್ಳು ೧೧ನ್ನು ದಾಟಿದೆ. ಮಿನಿಟಿನ ಮುಳ್ಳು ೭ರ ಮೇಲೆ ಇದೆ.

ಮುಳ್ಳುಗಳು ಎಲ್ಲೆಲ್ಲಿ ಅವೆ?

(೯) ೮ ಗಂಟೆಯಾಗಿ ೨೫ ಮಿನಿಟಾಗಿದೆ.
(೧೦) ೪ ಗಂಟೆಯಾಗಿ ೪೦ ಮಿನಿಟಾಗಿದೆ.
(೧೧) ೧೦ ಗಂಟೆಯಾಗಿ ೫೦ ಮಿನಿಟಾಗಿದೆ.
(೧೨) ೨ ಗಂಟೆಯಾಗಿ ೩೦ ಮಿನಿಟಾಗಿದೆ

ಕೆಲಸ ಮಾಡಿದ ವೇಳೆ ಎಷ್ಟೆಷ್ಟು ?

(೧೩) ಮುಂಜಾನೆ ೮ರಿಂದ ರಾತ್ರಿ ೮ರ ವರೆಗೆ.
(೧೪) ಮುಂಜಾನೆ ೧೧ರಿಂದ ರಾತ್ರಿ ೭ರ ವರೆಗೆ.
(೧೫) ಮಧ್ಯಾಹ್ನ ೪-೩೦ರಿಂದ ರಾತ್ರಿ ೧೧ರ ವರೆಗೆ.
(೧೬) ರಾತ್ರಿ ೨-೩೦ರಿಂದ ಮುಂಜಾನೆ ೯-೩೦ರ ವರೆಗೆ.
(೧೭) ೩ ವಾರಗಳಿಗೆ ದಿನಗಳೆಷ್ಟು ?
(೧೮) ೪ ತಾಸುಗಳಿಗೆ ಮಿನಿಟುಗಳೆಷ್ಟು ?
(೧೯) ೩ ಮಿನಿಟುಗಳಿಗೆ ಸೇಕೆಂದುಗಳೆಷ್ಟು ?
(೨೦) ವರುಷಕ್ಕೆ ತಿಂಗಳುಗಳೆಷ್ಟು ?
[ಅ] ಇಂಗ್ಲಿಷ ತಿಂಗಳುಗಳ ಹೆಸರು ಹೇಳಿರಿ.
[ಬ]. ಭಾರತೀಯ ತಿಂಗಳುಗಳ ಹೆಸರು ಹೇಳಿರಿ.
(೨೧) ವಾರದಲ್ಲಿ ನಿಮ್ಮ ಶಾಲೆ ನಡೆಯುತ್ತಿರುವ ದಿನಗಳೆಷ್ಟು ?
(೨೨ ೧ ವಾರಕ್ಕೆ ಎಷ್ಟು ತಾಸುಗಳಾಗುವವು ?

[೮]

**ವಿಶಿಷ್ಟ ಉದಾ:** ಪ್ರತಿಯೊಂದು ಬುಟ್ಟಿಯಲ್ಲಿ ೪೨ರಂತೆ ೨೦ ಬುಟ್ಟಿ ಹಣ್ಣುಗಳು ರಾಮಪ್ಪನಲ್ಲಿ ಅವೆ. ಮತ್ತು ಪ್ರತಿಯೊಂದರಲ್ಲಿ ೪೨ ರಂತೆ ಭೀಮಪ್ಪನಲ್ಲಿ ೬ ಬುಟ್ಟಿ ಹಣ್ಣುಗಳಿವೆ. ಆದರೆ ಇಬ್ಬರಲ್ಲಿಯೂ ಕೂಡಿ ಇದ್ದ ಒಟ್ಟು ಹಣ್ಣುಗಳೆಷ್ಟು ?

ಇವು ಗುಣಾಕಾರದ ಲೆಕ್ಕಗಳು. (ಏಕೆ ?)

| [ಅ] | [ಬ] |
| --- | --- |
| ೪೨ ಹಣ್ಣು | ೪೨ ಹಣ್ಣು |
| × ೨೦ | × ೬ |
| ೮೪೦ ಹಣ್ಣು (ರಾ) | ೨೫೨. ಹಣ್ಣು (ಭೀ) |

ಇನ್ನು ಇಬ್ಬರಲ್ಲಿಯೂ ಕೂಡಿ:—

ಲ೪೦ ಹಣ್ಣು (೨೦ ಬುಟ್ಟಿಗಳಲ್ಲಿ)
+ ೨೫೨ ಹಣ್ಣು (೬ ಬುಟ್ಟಿಗಳಲ್ಲಿ)

೧೧೯೨ ಹಣ್ಣು (೨೬ ಬುಟ್ಟಿಗಳಲ್ಲಿ)

ಆದರೆ ಇವೆರಡು ಲೆಕ್ಕಗಳನ್ನು ಒಮ್ಮೆಲೇ ಕೆಳಗಿನಂತೆ ಮಾಡಲಿಕ್ಕೆ ಬರುತ್ತದೆ.

ವಿಶಿಷ್ಟ ಉದಾ: ಪ್ರತಿಯೊಂದರಲ್ಲಿ ೪೨ರಂತೆ ೨೬ ಬುಟ್ಟಿಗಳಲ್ಲಿರುವ ಹಣ್ಣುಗಳೆಷ್ಟು ?

**ಬರೆಹ :**

೪೨ ಹಣ್ಣುಗಳು
× ೨೬

ಲ೪೦ (೪೨ ಹಣ್ಣು ೨೦ ಸಾರೆ)
+ ೨೫೨ (೪೨ ಹಣ್ಣು ೬ ಸಾರೆ)

೧೧೯೨ ಹಣ್ಣುಗಳು

ವಿವರ: ಮೊದಲು ೨ ಹತ್ತರ ಗಂಟುಗಳಿಂದ ಗುಣಿಸಿತು. ಬಿಡಿಕಾಳ ಜಾಗೆಯಲ್ಲಿ ೦ ಇಟ್ಟಿತು. ಆಮೇಲೆ ೬ ಬಿಡಿಕಾಳುಗಳಿಂದ ಗುಣಿಸಿತು. ಕೊನೆಗೆ ಎರಡೂ ಸಂಖ್ಯೆಗಳನ್ನು ಕೂಡಿಸಿತು. (ಗುಣಿಸತಕ್ಕ ಸಂಖ್ಯೆ ೨೬ರಲ್ಲಿ ೨ ಹತ್ತರ ಗಂಟು ಮತ್ತು ೬ ಬಿಡಿಕಾಳು ಎಂದು ೨ ಭಾಗ ಮಾಡಿಕೊಂಡು ಗುಣಿಸಲಾಯಿತು.)

∴ ೧೧೯೨ ಹಣ್ಣುಗಳು ಉತ್ತರ.

**ಸೂಚನೆ: ೦ ಕ್ಕೆ ಯಾವದೊಂದು ಸಂಖ್ಯೆಯಿಂದ ಗುಣಿಸಿದರೆ ೦ ಉತ್ತರ ಬರುತ್ತದೆ. ಹಾಗೆಯೇ ಯಾವದೊಂದು ಸಂಖ್ಯೆಗೆ ೦ ದಿಂದ ಗುಣಿಸಿದರೆ ೦ ಉತ್ತರ ಬರುತ್ತದೆ.**

ಉದಾ: [ಅ] ೦×೧೫=೦; [ಬ] ೨೧×೦ = ೦

**ಲೆಕ್ಕಗಳು**

೧) ೩ಲ ರೂ.ಗಳಿಗೆ ೧ ತೇಗಿನ ತೊಲೆ ಬರುತ್ತದೆ. ಆದರೆ ೨೧ ತೊಲೆಗಳಿಗೆ ಎಷ್ಟು ಹಣ ಕೊಡಬೇಕು ?

(೨) ೪೫ ರೂ.ಗಳಿಗೆ ಒಂದು ಚೀಲ ಅಕ್ಕಿ ದೊರೆಯುತ್ತದೆ. ಆದರೆ ೨೪ ಚೀಲ ಅಕ್ಕಿಯ ಬೆಲೆ ಎಷ್ಟು ?

(೩) ಪ್ರತಿಯೊಂದು ಮನೆಗೆ ೨೭ ರೂ. ಗಳಂತೆ ೩೭ ಮನೆಗಳ ಬಾಡಿಗೆ ಹಣ ಎಷ್ಟು ದೊರೆಯುವದು ?

(೪) ಒಂದು ಥಾನಿನಲ್ಲಿ ೪೪ ವಾರ ಅರಿವೆ ಇದೆ. ಇಂಥ ೩೨ ಥಾನುಗಳಲ್ಲಿರುವ ಅರಿವೆ ಎಷ್ಟು ?

(೫) ೫೨ರೂ. ಗಳಿಗೆ ೧ರಂತೆ ೪೫ ಆಕಳುಗಳ ಬೆಲೆ ಎಷ್ಟಾಗುತ್ತದೆ?

(೬) ೭೫ ರೂ.ಗಳಿಗೆ ಒಂದರಂತೆ ೬೪ ಎಮ್ಮೆಗಳನ್ನು ಮಾರಿದರೆ ನಮಗೆ ದೊರೆಯುವ ಹಣವೆಷ್ಟು ?

(೭) ಒಂದು ರೇಲ್ವೆ ಡಬ್ಬಿಯಲ್ಲಿ ೬೬ ಜನರು ಕೂಡ್ರುತ್ತಾರೆ. ಇಂಥ ೪೮ ಡಬ್ಬಿಗಳಲ್ಲಿ ಎಷ್ಟು ಜನರು ಕೂಡ್ರಬಹುದು ?

(೮) ಪ್ರತಿಯೊಬ್ಬ ಸೈನಿಕನ ತಿಂಗಳ ಊಟದ ವೆಚ್ಚ ೩೪ ರೂ. ಗಳಂತೆ ಹಿಡಿಯುತ್ತದೆ. ಆದರೆ ೩೬೫ ಸೈನಿಕರ ತಿಂಗಳ ಊಟದ ವೆಚ್ಚವೆಷ್ಟು ?

(೯) ಒಂದು ಶಾಲೆಯ ಹುಡುಗರು ದಿನದಲ್ಲಿ ೬೭೨ ಹಂಜಿಗಳನ್ನು ಸಿದ್ಧಪಡಿಸುತ್ತಾರೆ. ಆದರೆ ಅವರು ೮೪ ದಿನಗಳಲ್ಲಿ ಎಷ್ಟು ಹಂಜಿಗಳನ್ನು ಸಿದ್ಧಪಡಿಸುವರು ?

(೧೦) ಒಂದು ವರ್ಗದ ಹುಡುಗರು ದಿನಕ್ಕೆ ೮೬೫ ಸುತ್ತು ನೂಲುವರು. ಆದರೆ ೯೬ ದಿನಗಳಲ್ಲಿ ಎಷ್ಟು ಸುತ್ತು ನೂಲುವರು?

(೧೧) ೩೭೯ × ೬೪ = ? (೧೨) ೫೬೩ × ೮೩ = ?

## ೫. ಭಾಗಿಸುವದು



### [೧]

**ವಿಶಿಷ್ಟ ಉದಾ:** ಪ್ರತಿಯೊಬ್ಬನಿಗೂ ೩ ರಂತೆ ೧೨ ಬಾಳೆ ಹಣ್ಣುಗಳನ್ನು ಕೃಷ್ಣರಾಯರು ತಮ್ಮ ಮಕ್ಕಳಲ್ಲಿ ಹಂಚಿದರು. ಆದರೆ ಅವರಿಗೆ ಮಕ್ಕಳೆಷ್ಟು ?

ಪ್ರತಿಯೊಬ್ಬನಿಗೆ ೩ ರಂತೆ ಎಷ್ಟು ಮಕ್ಕಳಿಗೆ ಕೊಡಲಿಕ್ಕೆ ಬರುವದೋ ಅಷ್ಟು ಮಕ್ಕಳು ಅವರಿಗೆ ಇರಲಿಕ್ಕೆ ಬೇಕು. ಈಗ ೧೨ರಲ್ಲಿ

೩ನ್ನು ಎಷ್ಟು ಸಾರೆ ಕಳೆಯಲಿಕ್ಕೆ ಅಂದರೆ ಭಾಗಮಾಡಲಿಕ್ಕೆ ಬರುವ ದೆಂಬುದನ್ನು ನೋಡುವಾ.

| ಹತ್ತರಿದ್ದ ಹಣ್ಣು. | | ಒಬ್ಬಗೆ ಕೊಟ್ಟದ್ದು. | | ಉಳಿದುದು. |
|---|---|---|---|---|
| ೧೨ | — | ೩ | = | ೯ (ಒಬ್ಬನಿಗೆ ಕೊಟ್ಟಿತು) |
| ೯ | — | ೩ | = | ೬ (೨ನೆಯವನಿಗೆ ಕೊಟ್ಟಿತು) |
| ೬ | — | ೩ | = | ೩ (೩ನೆಯವನಿಗೆ ಕೊಟ್ಟಿತು) |
| ೩ | — | ೩ | = | ೦ (೪ನೆಯವನಿಗೆ ಕೊಟ್ಟಿತು) |

ಈಗ ಹಣ್ಣುಗಳು ತೀರಿದವು. ಪ್ರತಿಯೊಬ್ಬನಿಗೂ ೩ರಂತೆ ಕೊಡುವಾಗ ಅಷ್ಟು ಹಣ್ಣು ಕಡಿಮೆ ಕಡಿಮೆ (ವಜಾ) ಆದವು. ಆದರೆ ಇದೇ ಉತ್ತರವನ್ನು "೩ **ನಾಲ್ಕಲೆ** ೧೨" ಎಂದು ಮಗ್ಗಿಯನ್ನು ಅಂದುಕೊಂಡರೆ "**ನಾಲ್ಕಲೆ**" ಎಂಬ ಅಂಕಿಯಿಂದ ತಕ್ಷಣ ಹೇಳಲಿಕ್ಕೆ ಬರುತ್ತದೆ.

**∴ ೪ ಮಕ್ಕಳು ಉತ್ತರ.**

**ವಿಶಿಷ್ಟ ಉದಾ:** ಪ್ರತಿಯೊಂದು-ಪೆಟ್ಟಿಗೆ-ಚರಕಕ್ಕೆ ೧೧ ರೂ.ಗಳಂತೆ ದರವಿದೆ. ೫೫ ರೂ.ಗಳನ್ನು ಕೊಟ್ಟರೆ ಎಷ್ಟು ಚರಕಗಳು ಬರುವವು ?

ನಾವು ೧೧ ರೂ. ಕೊಟ್ಟರೆ ೧ ಚರಕ ಬರುತ್ತದೆ. ಇದೇ ರೀತಿ ಎಷ್ಟು ಸಾರೆ ಕೊಡುವೆವೋ ಅಷ್ಟು ಚರಕಗಳು ದೊರೆಯುವವು. ಹಾಗಾದರೆ ೫೫ ರೂ.ಗಳಲ್ಲಿ ೧೧ ರೂ.ಗಳಂತೆ ಎಷ್ಟು ಸಾರೆ ಕಳೆಯಲಿಕ್ಕೆ ಬರುತ್ತದೆಂಬುದನ್ನು ತೆಗೆಯುವಾ.

| ಹತ್ತರಿದ್ದ ರೂ. | | ಕೊಟ್ಟ ರೂ. | | ಉಳಿದ ರೂ. | |
|---|---|---|---|---|---|
| ೫೫ | — | ೧೧ | = | ೪೪ | (ಮೊದಲನೆಯ ಚರಕ) |
| ೪೪ | — | ೧೧ | = | ೩೩ | (೨ನೆಯ ಚರಕ) |
| ೩೩ | — | ೧೧ | = | ೨೨ | (೩ನೆಯ ಚರಕ) |
| ೨೨ | — | ೧೧ | = | ೧೧ | (೪ನೆಯ ಚರಕ) |
| ೧೧ | — | ೧೧ | = | ೦ | (೫ನೆಯ ಚರಕ) |

೫೫ ರೂ. ಗಳಲ್ಲಿ ೧೧ರೂ. ಗಳಂತೆ ೫ ಸಾರೆ ಕೊಡಲಿಕ್ಕೆ ಬರುತ್ತದೆ. ಅಂದಮೇಲೆ ನಮಗೆ ೫ ಚರಕಗಳು ದೊರೆಯುವವು. ಆದರೆ ೧೧ರ ಮಗ್ಗಿಯನ್ನು ೫೫ರ ವರೆಗೆ ಅಂದುಕೊಂಡರೆ (೧೧ ಐದಲೆ ೫೫) **"ಐದಲೆ"** ಈ ಸಂಖ್ಯೆಯಿಂದ ೫ ಚರಕಗಳು ಬರುತ್ತವೆಂದು ತಕ್ಷಣ ಹೇಳಲಿಕ್ಕೆ ಬರುತ್ತದೆ.

ಮೇಲಿನ ಎರಡೂ ಲೆಕ್ಕಗಳಿಂದ ಕಂಡುಹಿಡಿದ ಸಂಗತಿಯೆಂದರೆ:- **ಯಾವಾಗ ಒಂದೇ ಸಂಖ್ಯೆಯನ್ನು ಮತ್ತೆ ಮತ್ತೆ ಕಳೆಯಬೇಕಾಗುತ್ತದೆಯೋ ಅಂಥ ಪ್ರಸಂಗದಲ್ಲಿ ಮಗ್ಗಿಯನ್ನು ಅಂದುಕೊಂಡು ಉತ್ತರವನ್ನು ತಕ್ಷಣ ಹೇಳಲಿಕ್ಕೆ ಬರುತ್ತದೆ. ಈ ಸುಲಭ ರೀತಿಗೇ "ಭಾಗಿಸುವದು" ಎಂದು ಅನ್ನುವರು.** ಮೇಲಿನ ಲೆಕ್ಕಗಳು ಭಾಗಾಕಾರದವು. ಭಾಗಾಕಾರದ ಲೆಕ್ಕಗಳನ್ನು ಕೆಳಗಿನಂತೆ ಬರೆಯುತ್ತಾರೆ.

| **ಬರೆಹ:** | **ಓದುವದು:** |
|---|---|
| (೧) ೧೨ ÷ ೩ = ೪ | ೧೨ ಭಾಗಿಲೆ ೩ ಬರೋಬರಿ ೪ |
| (೨) ೫೫ ÷ ೧೧ = ೫ | ೫೫ ಭಾಗಿಲೆ ೧೧ ಬರೋಬರಿ ೫ |

ಮೇಲಿನ ವಿವರಣೆಯಿಂದ ಬರೆಹ ಓದುಗಳೆರಡೂ ನಿಮಗೆ ತಿಳಿದವು. ಇನ್ನು "ಭಾಗಿಲೆ" ಎನ್ನುವ ಸ್ಥಳದಲ್ಲಿ ÷ ಈ ಗುರುತನ್ನು ಉಪಯೋಗಿಸಲಾಗಿದೆ ಈ ಗುರುತಿನ ಅರ್ಥ "ಭಾಗಿಸುವದು" ಎಂದಾಗುತ್ತದೆ. ಯಾವ ಸಂಖ್ಯೆಯಿಂದ ಭಾಗಿಸುವದಿದೆಯೋ ಆ ಸಂಖ್ಯೆಯ ಹಿಂದೆ ÷ ಈ ಗುರುತನ್ನು ಬರೆಯುತ್ತಾರೆ. ಯಾವ ಸಂಖ್ಯೆಯು ಮತ್ತೆ ಮತ್ತೆ ಕಳೆಯತಕ್ಕದ್ದಿದೆಯೋ ಅದರಿಂದಲೇ ಭಾಗಿಸುವದಿರುತ್ತದೆ. ಮೊದಲಿನ ಲೆಕ್ಕದಲ್ಲಿ ೩ನ್ನು ಮೇಲಿಂದ ಮೇಲೆ ಕಳೆಯತಕ್ಕದ್ದಿರುತ್ತದೆ; ಅಂತೆಯೇ ೩ರಿಂದ ಭಾಗಿಸಲಾಗಿದೆ. ಎರಡನೆಯ ಲೆಕ್ಕದಲ್ಲಿ ೧೧ನ್ನು ಮೇಲಿಂದಮೇಲೆ ಕಳೆಯುವದಿದೆ; ಅಂತೆಯೇ ೧೧ರಿಂದ ಭಾಗಿಸಲಾಗಿದೆ.

**ಲೆಕ್ಕಗಳು**

**(ಕೆಳಗಿನ ಭಾಗಾಕಾರದ ಲೆಕ್ಕಗಳನ್ನು ಕೃತಿಯ ಮೂಲಕ ತಿಳಿದುಕೊಂಡು**

(೧) ೫ ವಿದ್ಯಾರ್ಥಿಗಳಿಗೆ ೧ ಲಪೇಟದಂತೆ ೨೦ ವಿದ್ಯಾರ್ಥಿಗಳಿಗೆ ಎಷ್ಟು ಲಪೇಟಗಳು ಬೇಕಾಗುವವು ?

(೨) ೪ ಮುತ್ತುಗಳಿಗೆ ೧ರಂತೆ ಚೌಕಳಿ ಮಾಡಿಸಿದೆವು. ೨೪ ಮುತ್ತುಗಳಿಂದ ಎಷ್ಟು ಚೌಕಳಿಗಳು ಆಗುವವು ?

(೩) ೭ ಕಾಗದಗಳಿಗೆ ೧ರಂತೆ ಪುಸ್ತಕ ಕಟ್ಟಿದೆವು. ೪೨ ಕಾಗದ ಗಳಿಂದ ಎಷ್ಟು ಪುಸ್ತಕಗಳಾಗುವವು ?

(೪) ಒಂದು ಲೆಕ್ಕ ಬಿಡಿಸಿದರೆ ೮ ಗುಣಗಳನ್ನು ಕೊಡುವದನ್ನು ಗೊತ್ತುಮಾಡಿತ್ತು. ಒಬ್ಬ ಹುಡುಗನು ೫೬ ಗುಣಗಳನ್ನು ದೊರಕಿ ಸಿದನು. ಆದರೆ ಆತನು ಬಿಡಿಸಿದ ಲೆಕ್ಕಗಳೆಷ್ಟು ?

(೫) ೧ ಪೆನ್ನಿಗೆ ೭ ರೂ. ಬೆಲೆ ಇದೆ. ೫೬ ರೂ.ಗಳಿಗೆ ಎಷ್ಟು "ಪೆನ್ನು"ಗಳು ದೊರೆಯುವವು ?

(೬) ೬ ರೂ. ಗಳಿಗೆ ೧ ಉತ್ತಮ ಕೊಳಲು ದೊರೆಯುವದು. ೫೪ ರೂ.ಗಳಿಗೆ ಎಷ್ಟು ಕೊಳಲು ದೊರೆಯುವವು ?

(೭) ಒಂದು ಪುಟದಲ್ಲಿ ೧೧ ಲೆಕ್ಕಗಳಿವೆ. ಆದರೆ ೭೭ ಲೆಕ್ಕಗಳಿ ಗಾಗಿ ಎಷ್ಟು ಪುಟಗಳು ಬೇಕಾಗುವವು ?

(೮) ತಿಂಗಳಿಗೆ ೧೨ ರೂ. ಗಳಂತೆ ಬಾಡಿಗೆ ಗೊತ್ತುಮಾಡಿ ಒಂದು ಮನೆಯನ್ನು ಬಾಡಿಗೆ ಹಿಡಿದೆವು. ಮನೆ ಬಿಡುವಾಗ ಲೆಕ್ಕ ಮಾಡಲು ೮೪ ರೂ. ಕೊಡಬೇಕಾಯಿತು. ಅಂದರೆ ಆ ಮನೆಯಲ್ಲಿ ನಾವು ಎಷ್ಟು ತಿಂಗಳು ವಾಸಿಸಿದಂತಾಯಿತು ?

(೯) ೧೩ ರೂ.ಗಳಿಗೆ ಒಂದು ಕೊಡದಂತೆ ಮಾರಲು ೧೦೪ ರೂ. ನಮಗೆ ದೊರೆತವು. ಆದರೆ ನಾವು ಮಾರಿದ ಕೊಡಗಳೆಷ್ಟು ?

(೧೦) ೧೨ ಪೇನ್ಸಿಲುಗಳನ್ನು ಕೂಡಿಸಿ ಒಂದು ಪುಡಿಕೆ ಕಟ್ಟು ತ್ತಾರೆ. ೯೬ ಪೇನ್ಸಿಲುಗಳನ್ನು ಕೊಟ್ಟು ಪುಡಿಕೆಗಳನ್ನು ಕಟ್ಟಲು ಹೇಳಿದರೆ ಎಷ್ಟು ಪುಡಿಕೆಗಳು ಸಿದ್ಧವಾಗುವವು ?

(೧೧) ೧೪ ರೂ. ಗಳಿಗೆ ೧ರಂತೆ ಗಡಿಯಾರ ತರಿಸಿದೆವು. ಕಂಪನಿ ಯವರಿಗೆ ನಾವು ೧೧೨ ರೂ. ಗಳನ್ನು ಕೊಡಬೇಕಾಯಿತು. ಆದರೆ ತರಿಸಿದ ಗಡಿಯಾರಗಳೆಷ್ಟು ?

(೧೨) ಒಂದೊಂದು ಸಾಲಿನಲ್ಲಿ ೧೬ ರಂತೆ ಮೆಣಸಿನಕಾಯಿ ಸಸಿಗಳನ್ನು ನೆಟ್ಟೆವು. ಒಟ್ಟಿಗೆ ೧೪೪ ಸಸಿಗಳನ್ನು ನೆಟ್ಟಿದ್ದರೆ ಎಷ್ಟು ಸಾಲುಗಳಾಗಿರಬೇಕು ?

(೧೩) ೧೨ ಬೆಂಕಿಪೆಟ್ಟಿಗೆಗಳ ಪುಡಿಕೆಗೆ ೧ ಡಝನು ಅನ್ನುತ್ತಾರೆ. ೧೦೮ ಬೆಂಕಿಪೆಟ್ಟಿಗೆಗಳಿಂದ ಡಝನಿನ ಎಷ್ಟು ಪುಡಿಕೆಗಳಾಗುವವು ?

(೧೪) ೮ ಫರ್ಲಾಂಗುಗಳೆಂದರೆ ೧ ಮೈಲು. ಕರಿಯಪ್ಪನು ೭೨ ಫರ್ಲಾಂಗು ನಡೆದುಬಂದಿದ್ದರೆ ಆತನು ಎಷ್ಟು ಮೈಲು ...... ಯಿತು ?

(೧೫) ೧೬ ಆ. = ೧ರೂ. ∴ ೧೨೮ ಆ. = ಎಷ್ಟು ರೂ.?

(೧೬) ೭ ದಿ. = ೧ ವಾರ ∴ ೬೩ ದಿ. = ಎಷ್ಟು ವಾರ?

(೧೭) ೨೪ ಆಣೆಗಳಿಗೆ ಪಾವಲಿಗಳೆಷ್ಟು ?

(೧೮) ೩೨ ದುಡ್ಡುಗಳಿಗೆ ಆಣೆಗಳೆಷ್ಟು ?

(೧೯) ೫೬ ಚವಲಿಗಳಿಗೆ ರೂ.ಗಳೆಷ್ಟು ?

(೨೦) ೮೪ ತಿಂಗಳುಗಳಿಗೆ ವರುಷಗಳೆಷ್ಟು ?

(೨೧) ೧೧೨ ಆಣೆಗಳಿಗೆ ರೂ.ಗಳೆಷ್ಟು ?

(೨೨) ೧೨೦ ಇಂಚುಗಳಿಗೆ ಫೂಟುಗಳೆಷ್ಟು ?

[೨]

ವಿಶಿಷ್ಟ ಉದಾ: ೧೮ ಕಾಗದಗಳನ್ನು ೬ ಹುಡುಗರಲ್ಲಿ ಸರಿಯಾಗಿ ಹಂಚಿದರೆ ಪ್ರತಿಯೊಬ್ಬನಿಗೆ ದೊರೆಯುವ ಕಾಗದಗಳೆಷ್ಟು?

೧೮ ಕಾಗದಗಳಲ್ಲಿ ಸರಿಯಾಗಿ ೬ ಭಾಗಗಳನ್ನು ಮಾಡತಕ್ಕದ್ದಿದೆ. ಪ್ರತಿಯೊಂದು ಭಾಗದಲ್ಲಿಯ ಕಾಗದಗಳ ಸಂಖ್ಯೆಯನ್ನು ತೆಗೆಯಬೇಕಾಗಿದೆ. ಅದಕ್ಕಾಗಿ ಹಂಚಿದ ಕ್ರಮವನ್ನು ನಿರೀಕ್ಷಿಸಿರಿ.

| ಪ್ರತಿಯೊಬ್ಬನಿಗೆ | ಆರು ಹುಡುಗರಿಗೆ | ಮಗ್ಗಿಯ ಓದ |
|---|---|---|
| ೧ ಕಾಗದ | ೬ ಕಾಗದಗಳು | ೬ ಒಂದಲೆ ೬ |
| ೨ ಕಾಗದ | ೧೨ ಕಾಗದಗಳು | ೬ ಎರಡಲೆ ೧೨ |
| ೩ ಕಾಗದ | ೧೮ ಕಾಗದಗಳು | ೬ ಮೂರಲೆ ೧೮ |

ಈಗ ೬ರ ಮಗ್ಗಿಯನ್ನು ಓದಲು "ಮೂರಲಿ" ಅಂದರೆ ೩ ಕಾಗದಗಳ ಸಂಖ್ಯೆ ಎಂಬುದು ತಿಳಿದು ಬಂದಿತು. ಇದನ್ನೇ ಕೆಳಗಿನಂತೆ ಬಿಡಿಸುವರು. ೧೮ ಕಾಗದಗಳು ÷ ೬ = ೩ ಕಾಗದಗಳು.

∴ ೩ **ಕಾಗದಗಳು ಉತ್ತರ.**

ಮೇಲಿನ ಲೆಕ್ಕದಿಂದ ಕಂಡುಹಿಡಿದ ಮಾತೆಂದರೆ:— ಯಾವದೊಂದು ಸಂಖ್ಯೆಯಲ್ಲಿ ಸರಿಯಾದ ಭಾಗಗಳನ್ನು ಮಾಡಿ ಒಂದರಲ್ಲಿಯ ವಸ್ತುಗಳ ಸಂಖ್ಯೆಯನ್ನು ಕಂಡುಹಿಡಿಯುವ ರೀತಿಯನ್ನೂ ಸಹ "ಭಾಗಾಕಾರ" ಎಂದು ಕರೆಯುತ್ತಾರೆ.

**ಲೆಕ್ಕಗಳು**

(ಕೆಳಗಿನವು ಭಾಗಾಕಾರದ ಲೆಕ್ಕಗಳು ಏಕೆ ? ಮೊದಲು ಬಾಯಿಂದ ಬಿಡಿಸಿರಿ. ಆಮೇಲೆ ಪಾಟಿಯಲ್ಲಿ)

(೧) ೩ ಹುಡುಗರಲ್ಲಿ ೧೨ ಹಣ್ಣುಗಳನ್ನು ಸರಿಯಾಗಿ ಹಂಚಿದರೆ ಒಬ್ಬನಿಗೆ ದೊರೆಯುವ ಹಣ್ಣುಗಳೆಷ್ಟು?

(೨) ೧೪ ಹಂಜಿಗಳನ್ನು ೨ ಬಾಲಕರು ಸರಿಯಾಗಿ ಹಂಚಿಕೊಂಡರು. ಪ್ರತಿಯೊಬ್ಬನಿಗೆ ದೊರೆತ ಹಂಜಿಗಳೆಷ್ಟು ?

(೩) ೫ ಕೋಟುಗಳಿಗೆ ೧೫ ಬಿರಡಿಗಳು ಬೇಕಾಗುವವು. ಆದರೆ ೧ಕ್ಕೆ ಬೇಕಾದ ಬಿರಡಿಗಳೆಷ್ಟು ?

(೪) ೫ ಬಾಕುಗಳ ಮೇಲೆ ೨೦ ಹುಡುಗರು ಕುಳಿತಿದ್ದಾರೆ. ಆದರೆ ಪ್ರತಿಯೊಂದರ ಮೇಲೆ ಕುಳಿತ ಬಾಲಕರೆಷ್ಟು ?

(೫) ೩೦ ದುಡ್ಡುಗಳನ್ನು ೬ ಹುಡುಗರಲ್ಲಿ ಸರಿಯಾಗಿ ಹಂಚಿದರೆ ಒಬ್ಬನಿಗೆ ದೊರೆತ ದುಡ್ಡುಗಳೆಷ್ಟು ?

(೬) ೭ ತಿಂಗಳ ಬಾಡಿಗೆ ೬೩ ರೂ. ಕೊಡಬೇಕಾಯಿತು. ಆದರೆ ತಿಂಗಳ ಬಾಡಿಗೆ ಎಷ್ಟು ?

(೭) ೧೩ ಕುರಿಗಳ ಬೆಲೆ ೧೧೭ರೂ. ಆದರೆ ೧ ಕುರಿಯ ಬೆಲೆ ಎಷ್ಟು ?

(೮) ೩ ಹುಡಿಗೆಯರು ಮತ್ತು ೫ ಹುಡುಗರಲ್ಲಿ ೪೮ ಹಂಜಿ

ಗಳನ್ನು ಸರಿಯಾಗಿ ಹಂಚಿದರೆ ಪ್ರತಿಯೊಬ್ಬರಿಗೆ ದೊರೆತ ಹಂಜಿಗಳೆಷ್ಟು ?

(೯) ೭ ಜರದ ಟೊಪ್ಪಿಗೆಗಳ ಬೆಲೆ ೩೫ ರೂ. ಆದರೆ ೧ ಟೊಪ್ಪಿಗೆಯ ಬೆಲೆ ಎಷ್ಟಾಗುತ್ತದೆ ?

(೧೦) ೧೭ "ಎಣ್ಣೆಯೊಲೆ" (ಸ್ಟೋವ್ಹ) ಗಳಿಗೆ ೧೫೩ ರೂ. ಬೆಲೆಯಾಗುತ್ತದೆ. ಆದರೆ ಒಂದರ ಬೆಲೆ ಎಷ್ಟು ?

(೧೧) ೧೪೪ ಹುಡುಗರನ್ನು ಸರಿಯಾಗಿ ೧೮ ಸಾಲುಗಳಲ್ಲಿ ನಿಲ್ಲಿಸಿದೆವು. ಪ್ರತಿಯೊಂದು ಸಾಲಿನಲ್ಲಿರುವ ಹುಡುಗರೆಷ್ಟು ?

(೧೨) ೧೭ ಸಾಲುಗಳಲ್ಲಿ ೧೧೯ ಖುರ್ಚಿಗಳಿವೆ. ಆದರೆ ಪ್ರತಿಯೊಂದು ಸಾಲಿನಲ್ಲಿರುವ ಖುರ್ಚಿಗಳೆಷ್ಟು ?

**ವಿಶಿಷ್ಟ ಉದಾ:** ೮ ಹುಡುಗರು ೭೨ ಸಾಲು ರೆಂಟೆ ಹೊಡೆದರು. ಪ್ರತಿಯೊಬ್ಬನ ಸಾಲುಗಳು ಅಷ್ಟಷ್ಟೇ ಇದ್ದರೆ ಒಬ್ಬನು ರೆಂಟೆ ಹೊಡೆದ ಸಾಲುಗಳೆಷ್ಟು ?

೭೨ ಸಾಲುಗಳಲ್ಲಿ ಸರಿಯಾದ ೮ ಭಾಗ ಮಾಡಬೇಕಾಗಿದೆ. ಆದ್ದರಿಂದ ಇದು ಭಾಗಾಕಾರದ ಲೆಕ್ಕ. ೭೨ಕ್ಕೆ ೮ರಿಂದ ಭಾಗಿಸಬೇಕು.

**ಬರೆಹ:**

೮)೭೨ ಸಾಲು(೯ ಸಾಲು
—೭೨
೦೦

**ಓದುವದು:** ೮ ಒಂಭತ್ತಲೆ ೭೨. ೯ ಭಾಗಾಕಾರ ಬಂದಿತು. (೭೨ನ್ನು ೭೨ರ ಕೆಳಗೆ ಬರೆದು ಕಡಿಮೆ ಮಾಡಿತು.) ೭೨ರಲ್ಲಿ ೭೨ ಕಳೆದರೆ ೦. (ಒಬ್ಬನ ಪಾಲಿಗೆ ೯ ಸಾಲುಗಳು ಬಂದವು.)

**∴ ೯ ಸಾಲುಗಳು ಉತ್ತರ.**

### ಲೆಕ್ಕಗಳು

(ಮೊದಲು ಬಾಯಿಲೆಕ್ಕ. ಆಮೇಲೆ ಪಾಟಿಯಲ್ಲಿ)

(೧) ೪ ಫೂ. ನೂಲೆಂದರೆ ೧ ಸುತ್ತು. ೨೮ ಫೂ. ನೂಲಿನಲ್ಲಿ ಎಷ್ಟು ಸುತ್ತುಗಳಾಗುವವು ?

(೨) ೩೫ ಕಾಗದಗಳು ನಮ್ಮಲ್ಲಿವೆ. ೫ ಕಾಗದಗಳಿಗೆ ಒಂದರಂತೆ ಪುಸ್ತಕ ತಯಾರಿಸಿದರೆ ಎಷ್ಟು ಪುಸ್ತಕಗಳಾಗುವವು ?

(೩) ೭ ಆಣೆಗಳಿಗೆ ೪೨ ಬಾಳೆಹಣ್ಣುಗಳು. ಆದರೆ ೧ ಆಣೆಗೆಷ್ಟು?

(೪) ೯ ಚಣ್ಣಗಳ ಬೆಲೆ ೬೩ ರೂ. ಆದರೆ ೧ ಚಣ್ಣದ ಬೆಲೆ ಎಷ್ಟು?

(೫) ೧೩ ಹುಡುಗರ ಇಂಗ್ಲಿಷ ಶಾಲೆಯು ಫೀ ೩೯ ರೂ. ಆದರೆ ಪ್ರತಿಯೊಬ್ಬನು ಕೊಡಬೇಕಾದ ಫೀ ಹಣವೆಷ್ಟು ?

(೬) ೧೨ ಸೀರೆಗಳಿಗೆ ೮೪ ರೂ. ಬೆಲೆ ಆಗುತ್ತದೆ. ಆದರೆ ಒಂದು ಸೀರೆಯು ಬೆಲೆ ಎಷ್ಟು ?

(೭) ೧೬ ಹಂಜಿಗಳಿಂದ ೧೨೮ ಸುತ್ತು ನೂಲು ಹೊರಟಿತು. ಆದರೆ ಒಂದು ಹಂಜಿಯಿಂದ ಹೊರಟ ನೂಲು ಎಷ್ಟು ?

(೮) ಒಂದು ವರುಷದ ಕೋಣೆಯ ಬಾಡಿಗೆ ೭೨ ರೂ. ಆದರೆ ೧ ತಿಂಗಳಿನ ಬಾಡಿಗೆ ಎಷ್ಟಾಗುತ್ತದೆ ?

(೯) ೧೫ ರೂ. ಗಳಿಗೆ ಒಂದರಂತೆ ೧೧೫ ರೂ. ಗಳ ಕನ್ನಡಿಗಳನ್ನು ಕೊಂಡೆವು. ಆದರೆ ನಾವು ಕೊಂಡ ಕನ್ನಡಿಗಳೆಷ್ಟು ?

(೧೦) ೧೬೨ ಲಪೇಟಗಳಲ್ಲಿ, ೧೮ ಲಪೇಟಗಳಿಗೆ ಒಂದರಂತೆ ಕಟ್ಟುಗಳನ್ನು ಕಟ್ಟಿದರೆ ಎಷ್ಟು ಕಟ್ಟುಗಳಾಗುವವು ?

(೧೧) ಕೆಲವು ಜನರು ಉಳವಿ ಜಾತ್ರೆಗೆ ಹೋಗಿಬಂದರು. ಪ್ರತಿಯೊಬ್ಬರು ೨೦ ರೂ. ಗಳಂತೆ ವೆಚ್ಚ ಮಾಡಲು ಒಟ್ಟಿಗೆ ೧೬೦ ರೂ. ವೆಚ್ಚ ಬಂತು. ಆದರೆ ಜಾತ್ರೆಗೆ ಹೋಗಿ ಬಂದ ಜನರೆಷ್ಟು ?

(೧೨) ೯೮ ರೂ. ÷ ೧೪=? (೧೩) ೧೪೪ ಹೂವು ÷ ೧೮ = ?

## [೪]

**ವಿಶಿಷ್ಟ ಉದಾ:** ೮೬ ಹೂವುಗಳಿಂದ ೨ ಮಾಲೆ ತಯಾರಿಸಿತು. ಪ್ರತಿಯೊಂಡರಲ್ಲಿ ಅಷ್ಟಷ್ಟೇ ಹೂವುಗಳಿವೆ. ಆದರೆ ಒಂದು ಮಾಲೆಯಲ್ಲಿದ್ದ ಹೂವುಗಳೆಷ್ಟು ?

ಈಗ ೮೬ ಹೂವುಗಳಲ್ಲಿ ಸರಿಯಾದ ೨ ಭಾಗ ಮಾಡಬೇಕಾಗಿದೆ. ಆದ್ದರಿಂದ ಇದು ಭಾಗಾಕಾರದ ಲೆಕ್ಕ. ೨ರಿಂದ ಭಾಗಿಸಬೇಕಾಗಿದೆ.

೨ರ ಮಗ್ಗಿಯನ್ನು ೮೬ರ ವರೆಗೆ ಅನ್ನಲು ಬರಲಾರದು. ಆದ್ದರಿಂದ ೮೬ನ್ನು ೮ ಹತ್ತರ ಗಂಟು, ೬ ಬಿಡಿಕಾಳು ಎಂದು ಎರಡು ಭಾಗಗಳನ್ನು ಮಾಡುವಾ. ಮೊದಲು ೮ ಹತ್ತರ ಗಂಟುಗಳಲ್ಲಿ, ಸರಿಯಾದ ೨ ಭಾಗ ಮಾಡಲು —೨ ನಾಲ್ಕಲೆ ೮ — ಪ್ರತಿಯೊಂದು ಭಾಗದಲ್ಲಿ ೪ ಹತ್ತರ ಗಂಟುಗಳಿದ್ದಂತಾಯಿತು. ಇನ್ನು ೬ ಬಿಡಿಕಾಳುಗಳಲ್ಲಿ ಸರಿ ೨ ಭಾಗ ಮಾಡಲು —೨ ಮೂರಲೆ ೬—ಪ್ರತಿಯೊಂದು ಭಾಗದಲ್ಲಿ ೩ ಬಿಡಿಕಾಳುಗಳಿದ್ದಂತಾಯಿತು. ಬಾಕಿ ಏನೂ ಉಳಿಯಲಿಲ್ಲ. ಪ್ರತಿಯೊಂದು ಭಾಗದಲ್ಲಿ ೪ ಹ, ೩ ಬಿ, ಅಂದರೆ ೪೩. ∴ ೪೩ ಹೂವು ಉತ್ತರ. ಈ ಲೆಕ್ಕವನ್ನು ಕೆಳಗಿನಂತೆ ಬರೆದು ಬಿಡಿಸುತ್ತಾರೆ.

| ಬರೆಹ: | ಓದುವದು: |
|---|---|
| ೨)೮೬ ಹೂವು(೪೩ ಹೂವು<br>—೮<br>೦೬<br>—೬<br>೦ | ೨ ನಾಲ್ಕಲೆ ೮. ೪ ಹ. ನಿಂದ ಭಾಗ ಹತ್ತಿತು. ೮ರಲ್ಲಿ ೮ ಕಳೆದರೆ ಬಾಕಿ ೦. ೬ ಬಿಡಿಕಾಳನ್ನು ಕೆಳಗೆ ತಕ್ಕೊಂಡಿತು. ೨ ಮೂರಲೆ ೬. ೩ ಬಿ. ನಿಂದ ಭಾಗ ಹತ್ತಿತು. ೬ರಲ್ಲಿ ೬ ಕಳೆದರೆ ಬಾಕಿ ೦. |

**∴ ೪೩ ಹೂವುಗಳು ಉತ್ತರ.**

**ಲೆಕ್ಕಗಳು (ಬಾ: ೧ರಿಂದ ೪)**

(೧) ೧ ದುಡ್ಡಿಗೆ ೩ ಸೂಜಿಗಳಾದರೆ, ೩೬ ಸೂಜಿಗಳಿಗೆಷ್ಟು ?

(೨) ೪೪ ಪುಟಗಳಲ್ಲಿ ಸರಿಯಾದ ೨ ಭಾಗ ಮಾಡಿದರೆ ೧ ಭಾಗದಲ್ಲಿರುವ ಪುಟಗಳೆಷ್ಟು ?

(೩) ಕಂದೀಲಿನ ಬೆಲೆ ೪ ರೂ. ೪೮ ರೂ. ಗಳನ್ನು ಕೊಟ್ಟರೆ ಎಷ್ಟು ಕಂದೀಲುಗಳು ಬರುವವು?

(೪) ೯೯ ಹತ್ತಿಯ ಕಾಳುಗಳಿದ್ದವು. ಒಂದು ಮಗು ೯,೯ರಂತೆ ಗುಂಪುಗಳನ್ನು ಮಾಡಿತು. ಆದರೆ ಮಗು ಮಾಡಿದ ಗುಂಪುಗಳೆಷ್ಟು ?

(೫) ೩ ಫೂ. = ೧ ವಾರ ∴ ೩೯೬ ಫೂಟುಗಳಿಗೆ ವಾರುಗಳೆಷ್ಟು ?

(೬) ೬೯೬ ಪುಸ್ತಕಗಳನ್ನು ೩ ಪೆಟ್ಟಿಗೆಗಳಲ್ಲಿ ಸರಿಯಾಗಿ ತುಂಬಿದರೆ ಪ್ರತಿಯೊಂದರಲ್ಲಿದ್ದ ಪುಸ್ತಕಗಳೆಷ್ಟು ?

(೭) ೮೪೮ ಹಂಜಿಗಳಲ್ಲಿ ಸರಿಯಾಗಿ ೪ ಭಾಗ ಮಾಡಿ ಕಾಗದ ಸುತ್ತಿ ಪುಡಿಕೆಗಳನ್ನು ಮಾಡಿದೆವು. ೧ ಪುಡಿಕೆಯಲ್ಲಿದ್ದ ಹಂಜಿಗಳೆಷ್ಟು ?

(೮) ೪೮೪ ಆಣೆಗಳಿಗೆ ಪಾವಲಿಗಳೆಷ್ಟು ?

(೯) ೬೪೨ ಆಣೆಗಳಿಗೆ ಚವಲಿಗಳೆಷ್ಟು ?

(೧೦) ಈ ವಾರದಲ್ಲಿ ೭೭೭೭ ರೂ. ಗಳ ಭತ್ತವನ್ನು ಮಾರಿದೆವು. ಆದರೆ ಪ್ರತಿದಿನದ ಮಾರಾಟದ ಹಣವೆಷ್ಟು ?

(೧೧) ೬೯೬೩ ರೂ. ಗಳನ್ನು ೩ ಜನರು ಸರಿಯಾಗಿ ಹಂಚಿಕೊಂಡರೆ ಪ್ರತಿಯೊಬ್ಬನ ಪಾಲಿಗೆ ಎಷ್ಟು ರೂಪಾಯಿ ದೊರೆತವು ?

(೧೨) ೪೨೮೭ ರೂ. ÷ ೨ = ? (೧೩) ೫೫೫೫ ÷ ೫ = ?

[೫]

**ವಿಶಿಷ್ಟ ಉದಾ:** ೮೪ ಪೆಂಡೆ ಹುಲ್ಲನ್ನು ೬ ಜನರು ಕೊಯ್ದು ತಂದಿದ್ದಾರೆ. ಅವರು ಎಲ್ಲ ಪೆಂಡೆಗಳನ್ನು ತಮ್ಮಲ್ಲಿ ಸರಿಯಾಗಿ ಹಂಚಿಕೊಂಡರು. ಆದರೆ ಪ್ರತಿಯೊಬ್ಬನ ಪಾಲಿಗೆ ದೊರೆತ ಪೆಂಡೆಗಳೆಷ್ಟು ?

೮೪ ಪೆಂಡೆಗಳನ್ನು ೬ ಜನರು ಸರಿಯಾಗಿ ಹಂಚಿಕೊಂಡಿದ್ದಾರೆ. ಈಗ ೮೪ ಪೆಂಡೆಗಳಲ್ಲಿ ಸರಿಯಾದ ೬ ಭಾಗಗಳನ್ನು ಮಾಡಬೇಕಾಗಿದೆ. ಆದ್ದರಿಂದ ಇದು ಭಾಗಾಕಾರದ ಲೆಕ್ಕ. ೬ ರಿಂದ ಭಾಗಿಸತಕ್ಕದ್ದಿದೆ. (ಏಕೆ ?)

**ಬರೆಹ:**

ಭಾಗಗಳು ಪೆಂಡೆ ಪೆಂಡೆ

```
೬ ) ೮೪ ( ೧೪
  — ೬
    ೨ ಹ. ಗಂ.
  × ೧೦
    ೨೦ ಬಿ.
  + ೪
    ೨೪ ಬಿ
  — ೨೪
    ೦೦
```

**ಓದುವದು:**

೬ ಒಂದಲೆ ೬. ೧ ಹ. ನಿಂದ ಭಾಗ ಹತ್ತಿತು. ೮ ರಲ್ಲಿ ೬ ನ್ನು ಕಳೆಯಲು ೨ ಹ. ಬಾಕಿ ಉಳಿಯಿತು. ೨ ಹ. ಅಂದರೆ ೨೦ ಬಿಡಿಕಾಳು. ಲೆಕ್ಕದಲ್ಲಿಯ ೪ ಬಿಡಿಕಾಳು ಕೂಡಿಸಲು ೨೪ ಬಿ. ಆದವು. ೬ ನಾಲ್ಕಲೆ ೨೪. ೪ ಬಿ. ನಿಂದ ಭಾಗ ಹತ್ತಿತು. ೨೪ ರಲ್ಲಿ ೨೪ ಕಳೆದರೆ ಬಾಕಿ ೦ ಉಳಿಯಿತು. ಆದ್ದರಿಂದ ಪ್ರತಿಯೊಬ್ಬನಿಗೆ ೧೪ ಪೆಂ. ಹು. ದೊರೆಯಿತು.

∴ ೧೪ ಪೆಂಡೆಗಳು ಉತ್ತರ.

### ಲೆಕ್ಕಗಳು

(೧) ೯೨ ದುಡ್ಡುಗಳಿಗೆ ಆಣೆಗಳೆಷ್ಟು ?

(೨) ೯೧ ದಿನಗಳಿಗೆ ವಾರಗಳೆಷ್ಟಾಗುವವು ?

(೩) ೮೭ ಮಾವುಗಳಲ್ಲಿ ಸರಿಯಾಗಿ ೩ ಗುಂಪುಗಳನ್ನು ಮಾಡಿದರೆ ೧ ಗುಂಪಿನಲ್ಲಿರುವ ಮಾವುಗಳೆಷ್ಟು ?

(೪) ೮ ಹೂವುಗಳಂತೆ ತಕ್ಕೊಂಡು ಮಾಲೆ ಕಟ್ಟಿದೆವು. ೯೬ ಹೂವುಗಳಲ್ಲಿ ಎಷ್ಟು ಮಾಲೆಗಳಾಗುವವು ?

(೫) ಸಾಬಾಣದ ೩ ವಡೆಗಳನ್ನು ಹಾಕಿ ಕಾಗದದ ಪೆಟ್ಟಿಗೆಯನ್ನು ಬಂದು ಮಾಡುತ್ತಾರೆ. ಹಾಗಾದರೆ ೪೩೨ ವಡೆಗಳನ್ನು ಹಾಕಲಿಕ್ಕೆ ಎಷ್ಟು ಕಾಗದದ ಪೆಟ್ಟಿಗೆಗಳು ಬೇಕಾಗುವವು ?

(೬) ೬ ರೂ. ಗಳಿಗೊಂದರಂತೆ ಉಣ್ಣೆಯ ಅಂಗಿಗಳನ್ನು ತರಿಸಿದರೆ ೭೫೬ ರೂ. ಗಳಿಗೆ ಎಷ್ಟು ಅಂಗಿಗಳು ಬರುವವು ?

(೭) ೩೧೬ ÷ ೨ = ?  (೮) ೮೭೬೫ ÷ ೫ = ?

[೬]

**ವಿಶಿಷ್ಟ ಉದಾ:** ೧೪೭ ರೂ. ಗಳನ್ನು ೩ ಜನರಲ್ಲಿ ಸರಿಯಾಗಿ ಹಂಚಿದರೆ ಒಬ್ಬನ ಪಾಲಿಗೆಷ್ಟು ರೂ. ಬರುವವು ?

ಇದು ಭಾಗಾಕಾರದ ಲೆಕ್ಕ. ೩ ರಿಂದ ಭಾಗಿಸಬೇಕಾಗಿದೆ. (ಏಕೆ?)

೩ ) ೧೪೭ ರೂ. ( ೪೯ ರೂ.
೧ ನೂ. ರೂ.
× ೧೦
೧೦ ಹ. ರೂ.
+ ೪
೧೪ ಹ. ರೂ.
− ೧೨
೦೨ ಹ. ರೂ.
× ೧೦
೨೦ ಬಿ. ರೂ.
+ ೭
೨೭ ಬಿ. ರೂ.
− ೨೭
೦೦

**ವಿವರಣೆ:** (೧) ೧ ನೂರನ್ನು ೩ರಲ್ಲಿ ಹಂಚಲು ಬಾರದ್ದರಿಂದ ೧ ನ್ನು ೧೦ ರಿಂದ ಗುಣಿಸಲು ೧೦ ಹ. ಗಂ. ಬಂದವು. ಅದರಲ್ಲಿ ಲೆಕ್ಕದಲ್ಲಿಯ ೪ ಹ. ಗಂ. ಕೂಡಿಸಲು ೧೪ ಹ. ಗಂ. ಆದವು.

ಆದರೆ ೧ರ ಮುಂದೆ ೪ ತೆಗೆದುಕೊಂಡರೆ ಸಹ ೧೪ ಆಗುತ್ತದೆ. ಅಂದರೆ ೧ ಕ್ಕೆ ೧೦ ರಿಂದ ಗುಣಿಸಿ ೪ ನ್ನು ಕೂಡಿಸಿದಂತೆಯೇ ಆಗುತ್ತದೆ. ಭಾಗಾಕಾರ ಮಾಡಿತು.

(೨) ಉಳಿದಂಥ ೨ ಹ. ಗಂ. ನ್ನು ಹಂಚಲಿಕ್ಕೆ ಬಾರದ್ದರಿಂದ ೧೦ ರಿಂದ ಗುಣಿಸಲು ೨೦ ಬಿ. ಬಂದವು. ಲೆಕ್ಕದಲ್ಲಿಯ ೭ ಬಿ. ಕೂಡಿಸಿತು. ೨೭ ಬಿ. ಬಂದುವು.

ಆದರೆ ೨ ರ ಮುಂದೆ ೭ ತೆಗೆದುಕೊಂಡರೂ ಸಹ ೨೭ ಬರುವದು. ಅಂದರೆ ೨ ಕ್ಕೆ ೧೦ ಗುಣಿಸಿ ೭ ಕೂಡಿಸಿದಂತೆಯೇ ಆಯಿತು. ಭಾಗಿಸಿತು. ∴ ೪೯ ಭಾಗಾಕಾರ ಬಂದಿತು.

ಈಗ ವಿವರವಾಗಿ ತಿಳಿದುಕೊಂಡ ಲೆಕ್ಕವನ್ನೇ ಸುಲಭ ರೀತಿಯಿಂದ ಕೆಳಗಿನಂತೆ ಬಿಡಿಸಲು ಬರುತ್ತದೆ. ನಿರೀಕ್ಷಿಸಿರಿ, ನೆನಪಿಡಿರಿ.

ಬರೆಹ:

೩ )೧೪೭ರೂ.( ೪೯ ರೂ.
| | |
೧೪
— ೧೨
೦೨೭
— ೨೭
೦೦

**ಓದುವದು :** ೧ ಕೆಳಕ್ಕೆ ತೆಗೆದುಕೊಂಡಿತು. ಅದಕ್ಕೆ ೩ ರಿಂದ ಭಾಗ ಹತ್ತದ್ದರಿಂದ ಮತ್ತೆ ೪ನ್ನು ೧ ರ ಬಲಕ್ಕೆ ತೆಗೆದುಕೊಂಡಿತು. ೧೪ ಆಯಿತು. ೩ ನಾಲ್ಕಲೆ ೧೨. ೪ ರಿಂದ ಭಾಗ ಹತ್ತಿತು. ೧೪ ರಲ್ಲಿ ೧೨ ಕಳೆಯಲು ೨ ಬಾಕಿ ಉಳಿಯಿತು. ಲೆಕ್ಕದಲ್ಲಿಯ ೭ ನ್ನು ೨ ರ ಬಲಕ್ಕೆ ತೆಗೆದುಕೊಂಡಿತು. ೨೭ ಆಯಿತು. ೩ ಒಂಭತ್ತಲೆ ೨೭. ೯ ರಿಂದ ಭಾಗ ಹತ್ತಿತು. ೨೭ ರಲ್ಲಿ ೨೭ ಕಳೆದರೆ ೦ ಬಾಕಿ ಉಳಿಯಿತು. ಭಾಗಾಕಾರ ೪೯ ಬಂದಿತು.

∴ ೪೯ **ರೂ. ಉತ್ತರ.**

**ಸೂಚನೆ :** ಲೆಕ್ಕದಲ್ಲಿಯ ಅಂಕಿಯನ್ನು ತೆಗೆದುಕೊಂಡಂತೆ ಆ ಅಂಕಿಯ ಕೆಳಗೆ | ಹೀಗೆ ಗುರುತು ಮಾಡುತ್ತಾರೆ. ಇದರಿಂದ ಮುಂದಿನ ಯಾವ ಅಂಕಿಯನ್ನು ತೆಗೆದುಕೊಳ್ಳಬೇಕೆಂಬುದು ತಕ್ಷಣ ತಿಳಿಯುತ್ತದೆ.

**ಲೆಕ್ಕಗಳು**

(೧) ಪ್ರತಿಯೊಂದು ಕಾಗದದಲ್ಲಿ ೪ ಪೇಡೆಗಳನ್ನು ಹಾಕಿ ಪುಡಿಕೆಗಳನ್ನು ಕಟ್ಟತಕ್ಕದ್ದಿದೆ. ೧೪೪ ಪೇಡೆಗಳ ಪುಡಿಕೆಗಳನ್ನು ಕಟ್ಟಿದರೆ ಎಷ್ಟಾಗುವವು ?

(೨) ತಾಸಿಗೆ ೬ ಮೈಲುಗಳಂತೆ ೧೯೨ ಮೈಲು ಹೋಗಲಿಕ್ಕೆ ಟಾಂಗೆಯುವನಿಗೆ ಎಷ್ಟು ವೇಳೆ ಬೇಕಾಗಬಹುದು ?

(೩) ೧೮೦ ÷ ೫ = ?   (೪) ೨೨೪ ÷ ೭ = ?

(೫) ೭ ರೂ. ಗಳಿಗೆ ೧ ರಂತೆ ೪೬೨ ರೂ. ಕೊಟ್ಟರೆ ಎಷ್ಟು ಚರಕಗಳು ಬರುವವು ?

(೬) ೫ ರೂ. ಗಳಿಗೆ ೧ ಸೊಲಿಗೆ (೪ ಸೇರು) ಅಕ್ಕಿ ದೊರೆಯುವದು. ಆದರೆ ೧೭೦ ರೂ. ಗಳಿಗೆ ಎಷ್ಟು ಸೊಲಿಗೆ ಅಕ್ಕಿ ದೊರೆಯುವದು ?

(೭) ೫೮೨೪ ಪೇರಲಹಣ್ಣುಗಳನ್ನು ೮ ಚಕ್ಕಡಿಗಳಲ್ಲಿ ಸರಿಯಾಗಿ ತುಂಬಿದರೆ ಪ್ರತಿಯೊಂದು ಚಕ್ಕಡಿಯಲ್ಲಿದ್ದ ಪೇರಲಗಳೆಷ್ಟು ?

(೮) ೮೬೭ ದಿವಸಗಳಿಗೆ ವಾರಗಳೆಷ್ಟು ?

(೯) ೧೯೫೨ ದುಡ್ಡುಗಳಿಗೆ ಆಣೆಗಳೆಷ್ಟು ?

(೧೦) ೨೩೩೧ ಫೂಟುಗಳಿಗೆ ಯಾರ್ಡುಗಳೆಷ್ಟು ?

(೧೧) ೩೧೮ ÷ ೬ = ?     (೧೨) ೬೭೫೯ ÷ ೯ = ?

[೭]

**ವಿಶಿಷ್ಟ ಉದಾ:** ೧೨ ರೂ. ಗಳಿಗೆ ೧ ರಂತೆ ನೇಗಿಲುಗಳನ್ನು ತರಿಸಿದೆವು. ೧೬೩೨ ರೂ. ಗಳನ್ನು ಕೊಟ್ಟಿದ್ದರೆ ದೊರೆತ ನೇಗಿಲುಗಳೆಷ್ಟು ?

೧೬೩೨ ರೂ. ಗಳಲ್ಲಿ ೧೨ ರಂತೆ ಎಷ್ಟು ಭಾಗಗಳಾಗುವವೆಂಬುದನ್ನು ತೆಗೆಯಬೇಕಾಗಿದೆ. ಆದ್ದರಿಂದ ಇದು ಭಾಗಾಕಾರದ ಲೆಕ್ಕ. ೧೨ ರಿಂದ ಭಾಗಿಸತಕ್ಕದ್ದಿದೆ.

**ಬರೆಹ:**

```
೧೨ ೧೬೩೨ರೂ.(೧೩೬ನೇ
    | | | |
   ———————
     ೧೬
   — ೧೨
     ———
     ೦೪೩
   — ೩೬
     ———
     ೦೭೨
   — ೭೨
     ———
     ೦೦
```

∴ ೧೩೬ ರೂ. ಉತ್ತರ.

**ಓದುವದು:** ೧ನ್ನು ತೆಗೆದುಕೊಂಡಿತು. ೧ಕ್ಕೆ ೧೨ ರಿಂದ ಭಾಗ ಹೋಗುವದಿಲ್ಲ. ಆದ್ದರಿಂದ ೬ನ್ನು ೧ರ ಬಲಕ್ಕೆ ತೆಗೆದುಕೊಂಡಿತು. ೧೬ ಆಯಿತು. ೧೨ ಒಂದಲೆ ೧೨. ೧ ರಿಂದ ಭಾಗ ಹತ್ತಿತು. ೧೬ ರಲ್ಲಿ ೧೨ ಕಳೆದರೆ ಬಾಕಿ ೪ ಉಳಿಯಿತು. ಲೆಕ್ಕದಲ್ಲಿಯ ೩ ನ್ನು ತೆಗೆದುಕೊಳ್ಳಲು ೪೩ ಆಯಿತು. ೧೨ ಮೂರಲೆ ೩೬. ೩ ರಿಂದ ಭಾಗ ಹತ್ತಿತು. ೪೩ ರಲ್ಲಿ ೩೬ ಕಳೆಯಲು ಬಾಕಿ ೭ ಉಳಿಯಿತು. ಲೆಕ್ಕದಲ್ಲಿಯ ೨ ನ್ನು ತೆಗೆದುಕೊಳ್ಳಲು ೭೨ ಆಯಿತು. ೧೨ ಆರಲೆ ೭೨. ೬ ರಿಂದ ಭಾಗ ಹತ್ತಿತು. ೭೨ರಲ್ಲಿ ೭೨ ಕಳೆದರೆ ಬಾಕಿ ೦ ಉಳಿಯಿತು. ∴ ಭಾಗಾಕಾರ ೧೩೬ ಬಂತು.

(ಸೂಚನೆ : " ತೆಗೆದುಕೊಳ್ಳು " ಶಬ್ದಕ್ಕೆ ಬದಲಾಗಿ " ಇಳಿಸಿಕೊಳ್ಳು " ಎಂಬುದನ್ನೂ ಉಪಯೋಗಿಸುತ್ತಾರೆ.)

## ಲೆಕ್ಕಗಳು

(೧) ೧೫ ರೂ. ಗಳಿಗೆ ೧ ಚೀಲದಂತೆ ಹಿಂಡಿಯುನ್ನು ಮಾರಿದೆವು. ಈ ದಿನದ ಮಾರಾಟದಿಂದ ೧೮೯೦ ರೂ. ದೊರೆತರೆ ನಾವು ಮಾರಿದ ಹಿಂಡಿಯು ಚೀಲಗಳೆಷ್ಟು ?

(೨) ೧೩ ರೂ. ಗಳಿಗೆ ಒಂದರಂತೆ ೨೯೩೮ ರೂ. ಗಳ ಸೀರೆಗಳನ್ನು ತರಿಸಿದೆವು. ಆದರೆ ನಾವು ತರಿಸಿದ ಸೀರೆಗಳೆಷ್ಟು ?

(೩) ಒಂದು ಡಬ್ಬಿಯಲ್ಲಿ ೧೮ ಸೇ. ವನಸ್ಪತಿ ತುಪ್ಪವನ್ನು ಹಾಕುತ್ತಾರೆ. ೨೯೫೨ ಸೇ. ತುಪ್ಪವನ್ನು ಹಾಕಲಿಕ್ಕೆ ಎಷ್ಟು ಡಬ್ಬಿಗಳು ಬೇಕಾಗುವವು?

(೪) ೬೭೨ ತಿಂಗಳುಗಳಿಗೆ ವರುಷಗಳೆಷ್ಟು ?

(೫) ೧೪೯೬ ÷ ೧೭ = ?   (೬) ೩೬೮೦ ÷ ೧೬ = ?

(೭) ೬೯೫೫ ÷ ೧೩ = ?   (೮) ೫೬೧೪ ÷ ೧೪ = ?

(೯) ೨೧೨೮ ಆಣೆಗಳಿಗೆ ರೂಪಾಯಿಗಳೆಷ್ಟು ?

(೧೦) ೨೯೧೬ ಇಂಚುಗಳಿಗೆ ಫೂಟುಗಳೆಷ್ಟು ?

(೧೧) ೧೫ ರೂ. ಗಳಿಗೆ ೧ ಚೀಲದಂತೆ ೪೨೩೦ ರೂ. ಗಳಿಗೆ ಎಷ್ಟು ಚೀಲ ಸವಣಿ ದೊರೆಯುವವು ?

(೧೨) ೪೨೩೮ ರೂ. ಕೊಟ್ಟು ಕಟ್ಟಿಗೆಯುನ್ನು ಕೊಂಡೆವು. ೧೩ ರೂ. ಗಳಿಗೆ ೧ ಖಂಡಿಯುಂತೆ ದರವಿದ್ದರೆ, ನಾವು ತರಿಸಿದ ಖಂಡಿಗಳೆಷ್ಟು ?

(೧೩) ಒಂದು ಮೋಟಾರ ಸಾಯಕಲು ತಾಸಿಗೆ ೧೮ ಮೈಲು ವೇಗದಿಂದ ಹೊರಟಿದೆ. ಅದು ೧೪೧೨ ಮೈಲು ಹೋಗಲಿಕ್ಕೆ ಎಷ್ಟು ತಾಸು ಹಿಡಿಯುವವು ?

(೧೪) ೭೭೭೬ ÷ ೧೮ = ?   (೧೫) ೨೩೯೪ ÷ ೧೯ = ?

(೧೬) ಒಬ್ಬ ಅಂಗಡಿಕಾರನು ೫೨೩೫ ರೂ. ಗಳ ಸರಕನ್ನು ತರಿಸಿದನು. ತರಿಸಿದ ದಿನವೇ ತನ್ನ ಸರಕಿನ ಮೂರನೆಯ ಒಂದು ಪಾಲನ್ನು ಮಾರಿಬಿಟ್ಟನು. ಆತನು ಮಾರಿದ ವಸ್ತುಗಳ ಕೊಂಡ ಬೆಲೆ ಎಷ್ಟಾಗುತ್ತದೆ?

---

# ೬. ಅಪೂರ್ಣಾಂಕ

★

[೧]




ಬದಿಯ ಆಕೃತಿಯಂಥ ಒಂದು ಚೌಕು ಕಾಗದವನ್ನು ತೆಗೆದುಕೊಳ್ಳಿರಿ. ಅದನ್ನು ಮಧ್ಯಕ್ಕೆ ಸರಿಯಾಗಿ ಮಡಿಚಿರಿ. ಈಗ ಬಿಚ್ಚಿರಿ. ಮಧ್ಯಕ್ಕೆ ಉದ್ದನೆಯ ಗುರುತು ಮೂಡಿದೆ. ಈ ಗುರುತಿನಿಂದ ಇಡಿಯ ಕಾಗದದಲ್ಲಿ ಸರಿಯಾದ ಎರಡು ಭಾಗಗಳಾದುವು ಕಂಡು ಬರುತ್ತದೆ. ಇದನ್ನು ಎರಡನೆಯ ಆಕೃತಿಯಲ್ಲಿ ಕಾಣುವಿರಿ. ಪ್ರತಿಯೊಂದು ಭಾಗಕ್ಕೆ "ಅರ್ಧ" ಎಂದು ಅನ್ನುತ್ತಾರೆ. ಇದಕ್ಕೆ "೨ನೆಯ ಪಾಲು" ಎಂದೂ ಅನ್ನುವರು.




ಈ ಆಕಾರದ ಊಟದ ವಸ್ತುಗಳನ್ನು ಹೇಳಬಲ್ಲಿರಾ? ರೊಟ್ಟಿ, ಹೋಳಿಗೆ ಮುಂತಾದವು. ನಿಮ್ಮ ತಾಯಿಯು ನಿಮಗೆ ರೊಟ್ಟಿಯ ನಡುವೆ ಸರಿಯಾಗಿ ಮಡಿಚಿ ಅದನ್ನು ೨ ಭಾಗವಾಗಿ ಮಾಡಿ, ಒಂದನ್ನು ನಿಮಗೆ ಕೊಟ್ಟರೆ ಎಷ್ಟನೆಯ ಭಾಗ ಕೊಟ್ಟಂತಾಯಿತು? (ಆಕೃತಿ ನೋಡಿ ಉತ್ತರ ಹೇಳಿರಿ.) ಆ ಭಾಗಕ್ಕೆ ನೀವು ಏನೆಂದು ಕರೆಯುತ್ತೀರಿ? "ಅರ್ಧ," ಸರಿ. ಒಂದು ಎರಡನೆಯ ಭಾಗವೆಂದೂ ಅನ್ನುತ್ತಾರೆ. ಭಾಗಕ್ಕೆ "ಅಂಶ" ವೆಂಬ ಹೆಸರುಂಟು.

೧ ಎರಡನೆಯ ಭಾಗ ಇದನ್ನು "೧ ಎರಡನೆಯ ಅಂಶ" ಎಂದು ಅನ್ನುವರು ಮತ್ತು ೧/೨ ಹೀಗೆ ಬರೆಯುವರು.

### ಲೆಕ್ಕಗಳು

ಬದಿಯ ಆಕೃತಿ ನಿರೀಕ್ಷಿಸಿರಿ.




(೧) ಇದರಲ್ಲಿ ಎಷ್ಟು ಸರಿಭಾಗ ಮಾಡಲಾಗಿದೆ?

(೨) ಪ್ರತಿಯೊಂದು ಭಾಗಕ್ಕೆ ರೂಢಿಯಲ್ಲಿ ಏನೆಂದು ಕರೆಯುತ್ತಾರೆ?

(೩) ಈಗ ಕಲಿತಂತೆ ೧ ಭಾಗಕ್ಕೆ ಏನೆಂದು ಕರೆಯುವಿರಿ?

(೪) ಅದನ್ನು ಬರೆದು ತೋರಿಸಿರಿ.

(೫) ನೀವೂ ಒಂದು ಕಾಗದ ತಕ್ಕೊಂಡು ಅರ್ಧಗಳನ್ನು ಮಾಡಿ ತೋರಿಸಿರಿ.
(೬) ೧ ಆಣೆಯ ೧/೨ ಅಂದರೆ ಎಷ್ಟು ದುಡ್ಡುಗಳು?
(೭) ೧ ಫೂಟಿನ ೧/೨ = ಎಷ್ಟು ಇಂಚುಗಳು?
(೮) ೧ ರೂಪಾಯಿಯ ೧/೨ = ಎಷ್ಟು ಆಣೆಗಳು?

## [೨]




ಬದಿಯಲ್ಲಿದ್ದಂತೆ ಆಕೃತಿಯನ್ನು ತಯಾರಿಸುವದಕ್ಕಾಗಿ ಒಂದು ಕಾಗದವನ್ನು ತಕ್ಕೊಳ್ಳಿರಿ. ಅದರ ಮೇಲೆ ಬಳೆ ಇಲ್ಲವೆ ದುಂಡನೆಯ ದೌತಿಯನ್ನಿಟ್ಟು ಸುತ್ತಲೂ ಗೆರೆಯನ್ನು ಎಳೆಯಿರಿ. ಕಾಗದ ತಕ್ಕೊಂಡು ಗೆರೆಯುಗುಂಟ ಕತ್ತರಿಸಿರಿ. ಈಗ ನಿಮಗೆ ದುಂಡನೆಯ ಆಕಾರದ ಕಾಗದ ದೊರಕಿದಂತಾಯಿತು. ಅದನ್ನು ಮಧ್ಯದಲ್ಲಿ ಸರಿಯಾಗಿ ಎಡಬಲದ ಅಂಚುಗಳು ಒಂದಕ್ಕೊಂದು ಹೊಂದುವಂತೆ ಮಡಿಚಿರಿ. ನಿಮ್ಮ ಕಾಗದದಲ್ಲಿ ಎಷ್ಟು ಭಾಗಗಳಾದವು? ೨. ಇನ್ನು ಆ ಜೋಡು ಪದರುಗಳನ್ನು ಮಧ್ಯಕ್ಕೆ ಮತ್ತೊಮ್ಮೆ ಮಡಿಚಿರಿ. ಈಗ ಎಷ್ಟು ಸರಿ ಭಾಗಗಳಾಗಿರುವವು? ಗೊತ್ತಾಗದಿದ್ದರೆ ಮಡಿಕೆಗಳನ್ನು ಬಿಡಿಸಿ ಭಾಗಗಳನ್ನು ಎಣಿಸಿ ಹೇಳಿರಿ. ಎಷ್ಟು? ೪. ಮೇಲೆ ಕೊಟ್ಟ ಆಕೃತಿಯಂತೆ ನಿಮ್ಮ ಕಾಗದದಲ್ಲಿಯೂ ೪ ಭಾಗಗಳಾದವು. ಒಂದು ಭಾಗದಲ್ಲಿ ಸೀಸಿನಿಂದ ಗೆರೆಗಳನ್ನೆಳೆಯಿರಿ. ಒಂದು ಭಾಗಕ್ಕೆ ರೂಢಿಯಲ್ಲಿ ಏನೆಂದು ಕರೆಯುತ್ತಾರೆ? "ಗಿರ್ಧ." ಹಾಗಾದರೆ ಗಿರ್ಧ ಅಂದರೇನು? "ಯಾವದೊಂದು ವಸ್ತುವಿನಲ್ಲಿ ಸರಿಯಾಗಿ ೪ ಭಾಗ ಮಾಡಿದ ಬಳಿಕ ಪ್ರತಿಯೊಂದು ಭಾಗಕ್ಕೆ ಗಿರ್ಧ ಅನ್ನುತ್ತಾರೆ." ಇದು ೧ ನಾಲ್ಕನೆಯ ಭಾಗವಾಗಿದೆ. ಅದಕ್ಕೆ **೧ ನಾಲ್ಕನೆಯ ಅಂಶ** ಎಂದು ಕರೆಯುವರು. ಮತ್ತು ೧/೪ ಹೀಗೆ ಬರೆಯುವರು.

**೧/೨, ೧/೪ ಇವು ಅಪೂರ್ಣ (ಪೂರ್ಣವಲ್ಲದ) ವಸ್ತುಗಳನ್ನು ಸೂಚಿಸುವವು.** ಅಂದರೆ ೧ ಪೂರ್ಣ ಅಂಕಿಗಿಂತ ಕಡಿಮೆ ಎಂದಂತಾಗುವದು. ಆದ್ದರಿಂದ ೧/೨, ೧/೪ ಮುಂ. ಸಂಖ್ಯೆಗಳಿಗೆ "**ಅಪೂರ್ಣಾಂಕ**" ಗಳೆಂದು ಕರೆಯುತ್ತಾರೆ.

(ಶಿಕ್ಷಕರಿಗೆ: ಮಕ್ಕಳಲ್ಲಿ ಹಸ್ತಕೌಶಲ್ಯ ಬೆಳೆಯಬೇಕೆಂದು ಬೇಕಾಗಿಯೇ ಮೇಲಿನ ಆಕೃತಿಯನ್ನು ತೆಗೆದುಕೊಳ್ಳಲಾಗಿದೆ. ತೊಂದರೆಯೆನಿಸಿದರೆ ಚೌಕು ಕಾಗದಗಳಲ್ಲಿ ನಾಲ್ಕು ಸರಿಭಾಗಗಳನ್ನು ಮಾಡಲು ಹೇಳಬೇಕು.)

### ಲೆಕ್ಕಗಳು

ಬದಿಯ ಆಕೃತಿ ನೋಡಿ ಉತ್ತರ ಹೇಳಿರಿ.




(೧) ಎಷ್ಟು ಸರಿಭಾಗಗಳನ್ನು ಮಾಡಿದೆ?
(೨) ೧ ಸರಿಭಾಗಕ್ಕೆ ರೂಢಿಯಲ್ಲಿ ಏನೆನ್ನುವರು?
(೩) ೧ ನಾಲ್ಕನೆಯ ಭಾಗವನ್ನು ಈಗ ಕಲಿತಂತೆ ಬರೆಯಿರಿ.
(೪) ಅದನ್ನು ಓದಿ ಹೇಳಿರಿ.

(೫) ಮೇಲಿನ ಆಕೃತಿಯಲ್ಲಿ ೪........ ಭಾಗ ಮಾಡಿದೆ. ತೆರವಿದ್ದಲ್ಲಿ ಯೋಗ್ಯ ಶ ಬರೆಯಿರಿ.

(೬) ೧ ರೂಪಾಯಿಯ ೧/೪ = ಎಷ್ಟು ಆಣೆಗಳು ?

(೭) ೧ ಫೂಟಿನ ೧/೪ = ಎಷ್ಟು ಇಂಚುಗಳು ?

(೮) ನೀವೂ ಒಂದು ಚೌಕು ಕಾಗದ ತಕ್ಕೊಂಡು ಅದರ ೧/೪ ಭಾಗವನ್ನು ಕತ್ತರಿಸಿ ತೆಗೆಯಿರಿ.

(೯) ಅಪೂರ್ಣಾಂಕ ಅಂದರೇನು ?

[೩]

ಬದಿಯ ಆಕೃತಿಯಲ್ಲಿ ತೋರಿಸಿದಂತೆ ಚೌಕು ಕಾಗದದಲ್ಲಿ ಭಾಗ ಮಾಡಬೇಕಾಗಿದೆ. ಅದಕ್ಕಾಗಿ ಅಗಲಿನಲ್ಲಿ ಒಂದು ಮಡಿಕೆಯನ್ನೂ ಉದ್ದದಲ್ಲಿ ಒಂದರ ಮೇಲೊಂದರಂತೆ ೨ ಮಡಿಕೆಗಳನ್ನೂ ಹಾಕಿ ಮಡಿಚಿರಿ. ಬಿಚಿಸಿರಿ. ಕಾಗದದಲ್ಲಿ ಮಡಿಕೆಗಳಿಂದಾಗಿ ೮ ಸರಿಭಾಗಗಳಾಗಿವೆ. ಪ್ರತಿಯೊಂದು ಭಾಗಕ್ಕೆ ೧ ಎಂಟನೆಯ ಭಾಗ ಎಂದು ಅನ್ನುತ್ತಾರೆ. ಓದು ಬರೆಹಗಳು ಮುಂದಿನಂತಿವೆ. —

**ಬರೆಹ: ೧/೮. ಓದು: "ಒಂದು ಎಂಟನೆಯ ಅಂಶ"**

**ವಿಶಿಷ್ಟ ಉದಾ:** ೩೨ ರೂ. ಗಳ ೧/೮ ಅಂದರೆ ಎಷ್ಟು ? ೩೨ ರೂ. ಗಳಲ್ಲಿ ೮ ಭಾಗ ಮಾಡುವದೆಂದರೆ ೮ ರಿಂದ ಭಾಗಿಸುವದು. ∴ ೩೨ರೂ. ÷ ೮ = ೪ರೂ.

**∴ ೪ ರೂ. ಉತ್ತರ.**

**ಲೆಕ್ಕಗಳು**

(೧) ೧/೮ ಹಣ್ಣು. ಇದನ್ನು ಓದಿರಿ.

(೨) ೧ ಪಾವಲಿಯ ೧/೮ = ಎಷ್ಟು ದುಡ್ಡುಗಳು ?

(೩) ೪೦ ವಾರಗಳ ೧/೮ ಅಂದರೆ ಎಷ್ಟು ವಾರಗಳು ?

(೪) ೧ ಅರ್ಧ ರೂಪಾಯಿಯ ೧/೮ = ಎಷ್ಟು ಆಣೆಗಳು ?

(೫) ಪ್ರತಿಯೊಬ್ಬರು ಒಂದೊಂದರಂತೆ ಚೌಕು ಕಾಗದ ತಕ್ಕೊಂಡು ಅದರಲ್ಲಿ ೧/೮ ಭಾಗವನ್ನು ಕತ್ತರಿಸಿ (ಇಲ್ಲವೆ ಗೆರೆಗುಂಟ ಹರಿದು) ತೆಗೆಯಿರಿ.

[೪]

ಒಂದು ಚೌಕು ಕಾಗದ ತಕ್ಕೊಂಡು ಅದರ ಉದ್ದಳತೆಗೆ ಒಂದರ ಮೇಲೊಂದರಂತೆ ೨ ಮಡಿಕೆ ಹಾಕಿ ಬಿಚ್ಚಿರಿ. ಆ ಮೇಲೆ ಅದರ ಅಗಲಕ್ಕೆ ೨ ಮಡಿಕೆಗಳನ್ನು ಒಂದರ ಮೇಲೊಂದರಂತೆ ಹಾಕಿ ಬಿಚ್ಚಿರಿ. ಕಾಗದದಲ್ಲಿರುವ ಸರಿಭಾಗಗಳು ಎಷ್ಟು ? ೧೬. ಹೌದು. ಬದಿಯ ಆಕೃತಿಯಲ್ಲಿಯೂ ಅಷ್ಟೇ ಭಾಗ

ಗಳಾಗಿರುವವಷ್ಟೇ. ಪ್ರತಿಯೊಂದು ಭಾಗಕ್ಕೆ "ಒಂದು ಹದಿನಾರನೆಯ ಭಾಗ" ವೆಂದು ಅನ್ನುತ್ತಾರೆ. ಇದರ ಓದು ಬರೆಹಗಳು ಮುಂದಿನಂತೆ—

**ಬರೆಹ:** $\frac{೧}{೧೬}$ **ಓದು: "ಒಂದು ಹದಿನಾರನೆಯ ಅಂಶ"**

**ವಿಶಿಷ್ಟ ಉದಾ:** ೬೪ ಯಾರ್ಡುಗಳ $\frac{೧}{೧೬}$ ಅಂದರೆ ಎಷ್ಟು ಯಾರ್ಡುಗಳು?

೬೪ ಯಾರ್ಡುಗಳಲ್ಲಿ ೧೬ ಭಾಗ ಮಾಡುವದೆಂದರೆ ೧೬ ರಿಂದ ಭಾಗಿಸಬೇಕಾಗುವದು. ಆದ್ದರಿಂದ—

೬೪ ಯಾ. ÷ ೧೬ = ೪ ಯಾ. ∴ **೪ ಯಾ. ಉತ್ತರ.**

## ಅಭ್ಯಾಸಗಳು

(೧) ೧ ಪಾವಲಿಯ $\frac{೧}{೧೬}$ = ಎಷ್ಟು ದುಡ್ಡು ?

(೨) ೪ ಫೂಟುಗಳ $\frac{೧}{೧೬}$ = ಎಷ್ಟು ಇಂಚುಗಳು ?

(೩) ೪೮ ರೂ. ಗಳ $\frac{೧}{೧೬}$ ಅಂದರೆ ಎಷ್ಟು ?

(೪) ಒಂದು ದುಂಡನೆಯ ಕಾಗದವನ್ನು ತೆಗೆದುಕೊಂಡು ಅದರಲ್ಲಿ $\frac{೧}{೧೬}$ ವನ್ನು ಕತ್ತರಿಸಿ ತೆಗೆಯಿರಿ.

ಬದಿಯ ಆಕೃತಿ ನೋಡಿ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ.



(೫) ಎಷ್ಟು ಭಾಗ ಗೆರೆಗಳಿಂದ ತುಂಬಿದೆ ?

(೬) ಎಷ್ಟು ಭಾಗ ಬೆಳ್ಳಗಿದೆ ?

(೭) ಎಷ್ಟು ಭಾಗ ಚುಕ್ಕೆಗಳಿಂದ ತುಂಬಿದೆ ?

(೮) ಎಷ್ಟು ಭಾಗ ಕಪ್ಪಿದೆ ?

(೯) ಕಪ್ಪುಭಾಗ + ಬಿಳಿಯ ಭಾಗ = ಇಡಿಯದರ ಎಷ್ಟನೆಯ ಭಾಗ ?

(೧೦) ಒಂದು ದೊಡ್ಡದಾದ ಚೌಕು ಕಾಗದವನ್ನು ತಕ್ಕೊಂಡು [ಅ] ಅದರಲ್ಲಿ ಸರಿಯಾದ ೩೨ ಭಾಗಗಳನ್ನು ಮಾಡಿರಿ. [ಬ] ಒಂದು ಭಾಗದಲ್ಲಿ ಸೀಸಿನ ಗೆರೆಗಳಿಂದ ತುಂಬಿರಿ. [ಕ] ಅದು ಎಷ್ಟನೆಯ ಭಾಗ ? [ಡ] ಅಪೂರ್ಣಾಂಕದಲ್ಲಿ ಬರೆದು ತೋರಿಸಿರಿ.

(೧೧) ಕೆಳಗಿನ ಆಕೃತಿಗಳನ್ನು ನಿರೀಕ್ಷಿಸಿರಿ. ಅವುಗಳ ಮುಂದೆ ಬರೆಯಲ್ಪಟ್ಟ ವಾಕ್ಯಗಳಲ್ಲಿ ತೆರವಿದ್ದಲ್ಲಿ ತುಂಬಿರಿ.



[ಅ] ರಾಮಪ್ಪನು ತನ್ನ ............. ಹೊಲದಲ್ಲಿ ಹತ್ತಿಯನ್ನು ಬಿತ್ತಿರುತ್ತಾನೆ.

[ಬ] ಭೀಮಪ್ಪನು ತನ್ನ ……………… ಹೊಲದಲ್ಲಿ ಜೋಳವನ್ನು ಬಿತ್ತಿರುತ್ತಾನೆ.

[ಕ] ಕಲ್ಲಪ್ಪನು ತನ್ನ ……………………… ಹೊಲದಲ್ಲಿ ಭತ್ತವನ್ನು ಬಿತ್ತಿರುತ್ತಾನೆ.

(೧೨) ವರ್ತಮಾನಪತ್ರದ ಹಾಳೆಯನ್ನು ತಕ್ಕೊಂಡು ಅದರಲ್ಲಿ ೱಳಿ ದಷ್ಟು ಕತ್ತರಿಸಿ ಇಲ್ಲವೆ ಹರಿದು ತೆಗೆಯಿರಿ.

# ೭. ಮಕ್ಕಳ ಆಟಗಳು

★

## [೧] ಮೂಲೋದ್ಯೋಗ, ಗಣಿತ ಮತ್ತು ಆಟ

(ಶಿಕ್ಷಕರಿಗಾಗಿ ಮಾತ್ರ)

ಶಿಕ್ಷಣವು ಮೂಲೋದ್ಯೋಗಗಳ ತಳಪಾಯದ ಮೇಲೆಯೇ ಆಧರಿಸಿ ರಚಿಸಲ್ಪಡಬೇಕೆಂದು ಅಂದು ಪೂಜ್ಯ ಬಾಪೂಜಿಯವರು ಆಶಿಸಿದುದು ಇಂದು ನನಸಾಗಿ ಪರಿಣಮಿಸಿದೆ.

ಅನ್ನ, ವಸ್ತ್ರ ಮತ್ತು ನೆರಳುಗಳ ಪೂರೈಕೆಗಾಗಿ ಕೈಕೊಂಡ ಉದ್ಯಮಗಳು ಮೂಲೋದ್ಯಮಗಳು. ಅವುಗಳ ಹೆಚ್ಚಿನ ವಿವರಣೆ ಇಲ್ಲಿ ಅನಾವಶ್ಯಕ. ಬೆಳಗಾವಿ-ಧಾರವಾಡ-ವಿಜಾಪುರ ಜಿಲ್ಲೆಗಳಲ್ಲಿ ವಸ್ತ್ರನಿರ್ಮಾಣದ ಉದ್ಯಮವನ್ನು ಆರಿಸಲಾಗಿದ್ದರೆ ಕಾರವಾರ ಜಿಲ್ಲೆಯಲ್ಲಿ ಒಕ್ಕಲತನವನ್ನು ಆರಿಸಲಾಗಿದೆ. ಉದ್ಯಮವು ಶಾಲೆಯಲ್ಲಿ ಸಾಗಿದಾಗ ವಿಷಯಕ್ಕಾಗಿ ಅನೇಕ ಅನುಕೂಲ ಸನ್ನಿವೇಶಗಳು ಶಿಕ್ಷಕರಿಗೆ ದೊರೆಯುವವು. ಅವುಗಳ ಸದುಪಯೋಗ ಮಾಡಿಕೊಳ್ಳುವದು ಪ್ರತಿಯೊಬ್ಬ ಶಿಕ್ಷಕರ ಕರ್ತವ್ಯವಾಗಿದೆ.

ಗಣಿತ-ವಿಷಯದ ಬಗ್ಗೆ ಮಕ್ಕಳಲ್ಲಿ ಜುಗುಪ್ಸೆಯುಂಟಾಗದಂತೆ ಆಟದ ರೂಪದಿಂದ ಅದು ಕಲ್ಪಿಸಲ್ಪಡಬೇಕು. ಈ ತತ್ವವನ್ನು ಮೂಲೋದ್ಯಮದಲ್ಲಿ ಸಹಜವಾಗಿ ಸಾಧಿಸಬಹುದು. ಹಂಜಿಗಳ ಎಣಿಕೆ, ಹತ್ತಿಯ ಕಾಳಿನ ತೂಕ, ಹತ್ತಿಯ ಬೆಲೆ, ಹತ್ತಿಯ ಪ್ರಕಾರಗಳು ಇಂಥ ಸಂಗತಿಗಳಲ್ಲಿ ಗಣಿತ ವಿಷಯವನ್ನು ಸ್ವಾಭಾವಿಕವಾಗಿ ಸಮಾವೇಶಗೊಳಿಸಿ ಪ್ರಗತಿಯನ್ನು ಸಾಧಿಸಬಹುದು. ಅವಯವಗಳ ಕಾರ್ಯಕ್ಷಮತೆಯೊಡನೆ ಮನಸ್ಸನ್ನೂ ಪಳಗಿಸಲು ಸುಲಭಸಾಧ್ಯ.

ನನ್ನ ಈ ಮೊದಲಿನ ವಿವರಣೆಗಳಲ್ಲಿ ಈ ತತ್ವ ಅನುಸರಿಸಿದುದನ್ನು ತಾವು ಗುರುತಿಸಿ ಮನಗಂಡಿರಲು ಸಾಕು. ಅಲ್ಲದೇ ಬೇರೆ ಕೆಲವು ಆಟಗಳನ್ನು ಈ ಅಧ್ಯಾಯದಲ್ಲಿ ವಿವರಿಸಿರುವೆ. ಶಿಕ್ಷಕರು ಇಷ್ಟಕ್ಕೆ ತೃಪ್ತರಾಗದೆ ಇನ್ನೂ ಅನೇಕ ಆಟಗಳನ್ನು ಕಲ್ಪಿಸಿ ಮಕ್ಕಳಿಂದ ಆಡಿಸಿದರೆ ಗಣಿತ ವಿಷಯ ಜಡವೆನಿಸದೆ ಸಹಜವೆನಿಸುವದು. ನೂತನ ಶಿಕ್ಷಣಕ್ರಮದ ತತ್ವಜ್ಞಾನವಾದರೂ ಇದನ್ನೇ ಹೇಳುತ್ತಿದೆ.

# [೨] ಅಂಗಡಿ

ಮಕ್ಕಳೇ, ಇಂದು ಅಂಗಡಿಯ ಆಟ ಆಡೋಣ. ಅದಕ್ಕಾಗಿ ದೌತಿ, ಟಾಕು, ಕ್ಯಾಗದ, ಸೀಸು, ರಬ್ಬರ, ಚೆಂಡು, ಚೀಲ ಮೊದಲಾದ ವಸ್ತುಗಳನ್ನು ಸಂಗ್ರಹಿಸಿರಿ. ಬೇರೆ ಬೇರೆ ನಾಣ್ಯಗಳನ್ನೂ ಮತ್ತು ಹಣ ಹಾಕಿಡಲು ಒಂದು ಪೆಟ್ಟಿಗೆಯನ್ನೂ ತೆಗೆದುಕೊಂಡು ಬನ್ನಿರಿ. ಹಣ ದೊರೆಯದಿದ್ದರೆ ಆಯಾ ನಾಣ್ಯಗಳ ಆಕಾರದ ಕಾಗದದ ತುಂಡುಗಳನ್ನು ಕತ್ತರಿಸಿಕೊಂಡು ಅವುಗಳ ಮೇಲೆ ಬೆಲೆ ಬರೆದು ಉಪಯೋಗಿಸಿರಿ. ನಿಮ್ಮ ಸಂಗ್ರಹ ಸಿದ್ಧವಾಯಿತಷ್ಟೇ?



ಈಗ ನಿಮ್ಮವರಲ್ಲೊಬ್ಬ ಚೆನ್ನಪ್ಪ ಶೆಟ್ಟರಾಗಲಿ. ಆತನೆ ಅಂಗಡಿಕಾರ. ಉಳಿದವರು ಗಿರಾಕಿಗಳಾಗಲಿ. ನಿಮ್ಮ ಎಲ್ಲ ಸಂಗ್ರಹ ಸಹಿತ ಆಟದ ಬೈಲಿಗೆ ನಡೆಯಿರಿ. ಒಂದು ಭಾಗದಲ್ಲಿ ಅಂಗಡಿಯನ್ನು ಸ್ಥಾಪಿಸಿರಿ. ಅಂಗಡಿಯಲ್ಲಿ ವಸ್ತುಗಳನ್ನು ಸರಿಯಾಗಿ ಹೊಂದಿಕೆಯಾಗುವಂತೆ ಓರಣದಿಂದ ಇಡಿರಿ. ಅಂಗಡಿಕಾರ ಕುಳಿತುಕೊಳ್ಳಲಿ. ಆತನ ಹತ್ತರ ಹಣದ ಪೆಟ್ಟಿಗೆಯಿರಲಿ. ಅದರಲ್ಲಿ ಕೆಲವು ನಾಣ್ಯಗಳನ್ನು ಹಾಕಿರಿ. ಕೆಳಗಿನಂತೆ ಪತ್ರಿಕೆ ತಯಾರಿಸಿ ಅಂಗಡಿಯಲ್ಲಿ ತೂಗು ಹಾಕಿರಿ.

**ಬೆಲೆಪಟ್ಟಿ**

| ವಸ್ತುಗಳ ಹೆಸರು | ದರ | ವಸ್ತುಗಳ ಹೆಸರು | ದರ |
|---|---|---|---|
| ರಬ್ಬರು | ೧ ಕ್ಕೆ ೧ ಆಣೆ | ಅಭ್ಯಾಸನ ಪುಸ್ತಕ | ೧ ಕ್ಕೆ ೨ ಆ. ೬ ಪೈ. |
| ಟಾಕು | ೧ ಕ್ಕೆ ೧ ಆ. ೯ ಪೈ. | ಚೆಂಡು | ೧ ಕ್ಕೆ ೪ ಆಣೆ |
| ಕಾಗದ | ೪ ಕ್ಕೆ ೧ ಆಣೆ | ತಕಲಿ | ೧ ಕ್ಕೆ ೫ ಆಣೆ |
| ದೌತಿ | ೧ ಕ್ಕೆ ೩ ಆ. ೩ ಪೈ | ಹಂಜಿ | ೧ ಸೇರಿಗೆ ೧೦ ಆಣೆ |
| ಪೇನ್ಸಿಲು | ೧ ಕ್ಕೆ ೨ ಆಣೆ | ಹಣಿಗೆ | ೧ ಕ್ಕೆ ೧ ಆ. ೬ ಪೈ. |
| ಗೊಂಬೆ | ೧ ಕ್ಕೆ ೬ ಆ. ೬ ಪೈ. | ಕನ್ನಡಿ | ೧ ಕ್ಕೆ ೬ ಆ. ೩ ಪೈ. |

ಅಂಗಡಿಯ ಮುಂದುಗಡೆಯಲ್ಲಿ ಗಿರಾಕಿಗಳು ಕುಳಿತುಕೊಳ್ಳಲಿ. ಆಟ ಪ್ರಾರಂಭಿಸಿರಿ. ಶಿಸ್ತನ್ನು ಪಾಲಿಸುವದಕ್ಕಾಗಿ ಒಬ್ಬೊಬ್ಬ ಗಿರಾಕಿ ಅಂಗಡಿಗೆ ಹೋಗಬೇಕು. ಅಲ್ಲಿ ಬೆಲೆಪಟ್ಟಿ ನೋಡಿ ತನಗೆ ಬೇಕಾದ ವಸ್ತುಗಳನ್ನು ಆರಿಸಿಕೊಂಡು ಅವುಗಳ ದರದ ಬಗ್ಗೆ ವಿಚಾರ ವಿನಿಮಯ ಮಾಡಬೇಕು. ಗಿರಾಕಿ ಹಾಗೂ ಅಂಗಡಿಕಾರ

ರಿಬ್ಬರೂ ಲೆಕ್ಕ ಮಾಡಬೇಕು. ಗಿರಾಕಿಯು ಎಷ್ಟು ಹಣ ಕೊಡಬೇಕೆಂದು ಕೇಳ ಬೇಕು. ಕೂಡಲೇ ಅಂಗಡಿಕಾರನು ಇಂತಿಷ್ಟು ಹಣ ಕೊಡಬೇಕಾಗುತ್ತದೆ ಎಂದು ಉತ್ತರಿಸಬೇಕು. ಗಿರಾಕಿ ಹಣ ಕೊಟ್ಟು ತನ್ನ ವಸ್ತುಗಳನ್ನು ಪಡೆದುಕೊಂಡು ಮರಳಿ ಬರಬೇಕು. ಇವರಿಬ್ಬರು ಲೆಕ್ಕ ಮಾಡಿದುದು ಸರಿಯಿದೆಯೋ ಎಂಬು ದರ ಬಗ್ಗೆ ಉಳಿದವರು ವಿಚಾರ ಮಾಡುತ್ತಿರಬೇಕು. ತಪ್ಪಿದಲ್ಲಿ ತಿದ್ದಬೇಕು. ಆ ಮೇಲೆ ಮತ್ತೊಬ್ಬ ಗಿರಾಕಿ ಹೋಗಬೇಕು.

ಗಿರಾಕಿಗಳಾದವರು ರೂಪಾಯಿ, ಎಂಟಾಣೆ ಇಂಥ ದೊಡ್ಡ ನಾಣ್ಯಗಳನ್ನು ಬಳಸುವದರಿಂದ ಲೆಕ್ಕದ ರೀತಿ ತಿಳಿಯುವದಲ್ಲದೆ ನಾಣ್ಯಗಳ ಪರಸ್ಪರ ಸಂಬಂಧವೂ ಗೊತಾಗುತ್ತದೆ. ಎಲ್ಲ ಮಕ್ಕಳಿಗೂ ಶಿಟ್ಟಿರಾಗುವ ಸರತಿ ದೊರೆತ ಬಳಿಕ ಆಟವನ್ನು ಮುಕ್ತಾಯಗೊಳಿಸಬೇಕು.

## [೩] ಉದ್ದ ಜಿಗಿಯುವದು

ಮಕ್ಕಳೇ, ನಿಮ್ಮ ಗುರುಗಳನ್ನು ಕೂಡಿಕೊಂಡು ಆಟದ ಬಯಲಿಗೆ ನಡೆ ಯಿರಿ. ಸಂಗಡ (೧) ಒಂದು ಉದ್ದನೆಯ ಹುರಿ (೨) ಫೂಟಪಟ್ಟಿ (೩) ಗುರುತು ಮಾಡುವದಕ್ಕಾಗಿ ಖಡು, ಇಲ್ಲವೆ ಚೂಪಾದ ಕಲ್ಲು, ಈ ವಸ್ತುಗಳನ್ನು ತಕ್ಕೊಳ್ಳಿರಿ.

ನೀವು ಜಿಗಿಯತಕ್ಕ ಸ್ಥಳದಲ್ಲಿ ನಿಮ್ಮ ದಿಸೆಯ ಅಡ್ಡಲಾಗಿ –ಸ್ಥಳದ— ಎಡ ಬಲ ಬದಿಗಳ ವರೆಗೂ ಹುರಿಯನ್ನು ಇಡಿರಿ. ಜಿಗಿಯತಕ್ಕ ಸ್ಥಳದಿಂದ ಹಿಂದೆ ೩೦, ೪೦ ಹೆಜ್ಜೆಗಳಷ್ಟು ದೂರಕ್ಕೆ ಸಾಲಾಗಿ ನಿಲ್ಲಿರಿ. ಸರತಿಯ ಪ್ರಕಾರ ಒಬ್ಬೊಬ್ಬರೇ ಓಡಿ ಬಂದು ಜಿಗಿಯತಕ್ಕದ್ದಿದೆ. ಗುರುಗಳ ಕೈಯಲ್ಲಿ ಗುರುತು ಮಾಡಲಿಕ್ಕೆಂದು ಖಡು (ಇಲ್ಲವೆ ಚೂಪಾದ ಕಲ್ಲು) ಇರಲಿ. ಫೂಟಪಟ್ಟಿಯೂ ಅವರ ಹತ್ತಿರ ಇರಲಿ.



ಜಿಗಿಯುವವನು ಓಡುತ್ತ ಬರಲಿ. ಅವನು ಒಂದು ಪಾದವನ್ನು ಹುರಿಯ ಮೇಲಿಟ್ಟು ತನ್ನ ಶಕ್ತಿಯ ನ್ನೆಲ್ಲ ಉಪಯೋಗಿಸಿ ಪುಟಿಗೆ ತಕ್ಕೊಂಡು ಜಿಗಿಯ ಬೇಕು. ( ಇನ್ನೊಂದು ಪಾದ ಹುರಿಯ ಹಿಂದೆಯೇ ಇಟ್ಟಿರಲಿಕ್ಕೆ ಬೇಕು. ) ಕೆಲವು ಅಂತರದ ಮೇಲೆ ಜಿಗಿದು ನಿಂತ ಸ್ಥಳದಲ್ಲಿ

ಮಣ್ಣಿನಲ್ಲಿ ಎರಡೂ ಪಾದಗಳ ಆಕೃತಿ ಮೂಡಿದುದು ಕಾಣಬರುವದಷ್ಟೇ! ಹಿಂದಿನ ಪಾದದ ಹಿಮ್ಮಡದಲ್ಲಿ ಖಡುವಿನಿಂದ —— ಹೀಗೆ ಅಡ್ಡವಾಗಿ ಗುರುಗಳು ಗುರುತು ಮಾಡುವರು. ಜಿಗಿದವನು ಗುರುಗಳಿಂದ ಫೂಟಪಟ್ಟಿಯನ್ನು ತೆಗೆದುಕೊಂಡು, ಹುರಿಯಿಂದ, ಗುರುತುಮಾಡಿದ ಸ್ಥಳದ ವರೆಗೆ ಜಿಗಿದ ಅಂತರವನ್ನು ಫೂಟು-ಇಂಚುಗಳಲ್ಲಿ ಅಳೆಯಬೇಕು. ಮತ್ತು ಆ ಅಳತೆಯನ್ನು ಗುರುಗಳ ಹತ್ತರ ಇದ್ದ ಟಿಪ್ಪಣಿಯ ಕಾಗದದಲ್ಲಿ ಬರೆದುಕೊಟ್ಟು ತನ್ನ ಸ್ಥಳಕ್ಕೆ ಹೋಗಿ ನಿಂತುಕೊಳ್ಳಬೇಕು. ಅನುಕ್ರಮದಿಂದ ಸರತಿಯ ಪ್ರಕಾರ ಎಲ್ಲ ಮಕ್ಕಳೂ ಜಿಗಿಯಬೇಕು. ಜಿಗಿದ ಅಂತರವನ್ನು ಅಳೆದು ಟಿಪ್ಪಣಿ ಕಾಗದದಲ್ಲಿ ಬರೆಯಲು ಮರೆಯಬಾರದು. ಟಿಪ್ಪಣಿ ಕಾಗದದಲ್ಲಿ ಬರೆದ ಅಳತೆಗಳಿಂದ ಬಹು ದೂರ ಅಂತರ ಜಿಗಿದವರನ್ನೂ ತೀರ ಕಡಿಮೆ ಅಂತರ ಜಿಗಿದವರನ್ನೂ ಕಂಡುಹಿಡಿಯಬೇಕು. ಎಲ್ಲರ ಅಳತೆಗಳನ್ನೂ ಒಂದಕ್ಕೊಂದು ಹೋಲಿಸಿ ಅನುಕ್ರಮವನ್ನು ನಿರ್ಣಯಿಸಬೇಕು. ಬಳಿಕ ಆಟವನ್ನು ಮುಗಿಸಬೇಕು.

## [೪] ಎತ್ತರ ಜಿಗಿಯುವದು

ಆಟದ ಬೈಲಿನಲ್ಲಿ (ಎರಡರ ನಡುವೆ ಕೆಲ ಅಂತರ ಬಿಟ್ಟು) ಎರಡು ಕಂಬಗಳನ್ನು ನೆಡಬೇಕು. ನೆಲದಿಂದ ಮೇಲಕ್ಕೆ ೧ ಫೂ. ಅಂತರ ಬಿಟ್ಟು ಪ್ರತಿಯೊಂದು ಕಂಬದಲ್ಲಿ ಒಂದೊಂದು ಮೊಳೆ ಜಡಿಯಬೇಕು. ಅವುಗಳು ಅರ್ಧ ಇಂಚಿನಷ್ಟು ಹೊರಗೆ ಹಾದಿರಲಿ. ಆ ಮೊಳೆಗಳಿಂದ ಮೇಲಕ್ಕೆ ಪ್ರತಿ ಇಂಚಿಗೆ ಒಂದರಂತೆ ೨೫, ೩೫ ರಂತೆ ಮೊಳೆಗಳನ್ನು ಬಡಿಯಿರಿ. ಅವೂ ಅರ್ಧ ಇಂಚಿನಷ್ಟು ಹೊರಗೆ ಹಾದಿರಲಿ. ಪ್ರತಿಯೊಂದು ಕಂಬದಲ್ಲಿ ೩೬ ರಂತೆ ಮೊಳೆಗಳಿದ್ದಂತಾಯಿತು. ಎಲ್ಲ ಮೊಳೆಗಳೂ ಜಿಗಿಯತಕ್ಕ ಮಕ್ಕಳೆಡೆಗೇ ಮುಖ ಮಾಡಿರಬೇಕು. ಈ ಸಿದ್ಧತೆಯನ್ನೆಲ್ಲ ಮೊದಲಿಗೇ ಮಾಡಿಟ್ಟಿರಬೇಕು.

ಇನ್ನು ಆಟದ ಬೈಲಿಗೆ ನಡೆಯಿರಿ. ಸಂಗಡ ಒಂದು ಹುರಿಯನ್ನು ತಕೊಳ್ಳಿರಿ. ಅದರ ಉದ್ದಳತೆ ಎರಡೂ ಕಂಬಗಳ ನಡುವಿನ ಅಂತರವನ್ನು ಮಿಗುವಷ್ಟು ದೊಡ್ಡದಿರಬೇಕು. ಹುರಿಯ ಎರಡೂ ತುದಿಗಳಲ್ಲಿ ಒಂದೊಂದರಂತೆ ಸುಮಾರು ಪಾವಸೇರು ತೂಕದ ಉಸುಕಿನ ಗಂಟು ಕಟ್ಟಿರಿ. ನೆಲದಿಂದ ಕೆಲ ನಿಯಮಿತ ಅಂತರ ಮೇಲಕ್ಕೆ ಎರಡೂ ಕಂಬಗಳಲ್ಲಿರುವ ಮೊಳೆಗಳ ಮೇಲೆ ಹಾಯಿಸಿ ಹುರಿಯನ್ನು ತೂಗು ಬಿಡಬೇಕು ಉಸುಕಿನ ಗಂಟುಗಳು ಕಂಬಗಳ ಬದಿಗೆ ತಮ್ಮ ಒಜ್ಜೆಯಿಂದಾಗಿ ನೇತಾಡುತ್ತಿರುವವು. ಅವು ಹುರಿಯನ್ನು ಎಳೆದು ಹಿಡಿದಿರುವವು.

ಜಿಗಿಯುವವರು ಸುಮಾರು ೨೫ ಹೆಜ್ಜೆಗಳಷ್ಟು ಅಂತರದಿಂದ ಸಾವಕಾಶವಾಗಿ ಓಡುತ್ತ ಬಂದು ಎರಡೂ ಕಂಬಗಳ ನಡುವಿನ ಹುರಿಯ ಮೇಲ್ಗಡೆಯಲ್ಲಿ ಅದಕ್ಕೆ



ತಾಗದೆ ಹಾಯುವಂತೆ ಜಿಗಿಯುಬೇಕು (ಜಿಗಿಯುವ ಬಗ್ಗೆ ವಿಶಿಷ್ಟ ನಿಯಮಗಳನ್ನು ಶಿಕ್ಷಕರು ಸೂಚಿಸಬೇಕು.) ಪ್ರತಿಯೊಬ್ಬನು ಜಿಗಿದ ಪರಮಾವಧಿ ಎತ್ತರವನ್ನು ಕಂಡು ಹಿಡಿಯುವದಕ್ಕಾಗಿ ಪ್ರತಿಸಾರೆ ಒಂದಾಗಲಿ ಹೆಚ್ಚಾಗಲಿ ಇಂಚಿನಷ್ಟು ಎತ್ತರಕ್ಕೆ ಹುರಿಯನ್ನು ಎತ್ತರಿಸುತ್ತ ಹೋಗಬೇಕು.

ಜಿಗಿಯುವವರು ಆದಷ್ಟು ಹೆಚ್ಚು ಎತ್ತರಕ್ಕೆ ಜಿಗಿಯಲು ಪ್ರಯತ್ನಿಸಬೇಕು. ಪ್ರತಿಯೊಬ್ಬನು ಜಿಗಿದ ಪರಮಾವಧಿ ಎತ್ತರವನ್ನು ಟಿಪ್ಪಣಿ ಪುಸ್ತಕದಲ್ಲಿ ಬರೆಯುತ್ತ ಹೋಗಬೇಕು. ಬರೆದಿಟ್ಟ ಅಳತೆಗಳಿಂದ ತೀರ ಎತ್ತರಕ್ಕೆ ಜಿಗಿದವನೂ, ತೀರ ಕಡಿಮೆ ಎತ್ತರಕ್ಕೆ ಜಿಗಿದವನೂ ಗೊತ್ತಾಗುವದು. ಕೊನೆಗೆ ಅನುಕ್ರಮವನ್ನು ಗೊತ್ತುಪಡಿಸಿ ಆಟವನ್ನು ಮುಕ್ತಾಯಗೊಳಿಸಬೇಕು.

## [೫] ಅಂಚೇಕಚೇರಿ (ಪೋಸ್ಟ ಆಫೀಸ)

ಮುಂಬಯಿ ಮೊದಲಾದ ಬೇರೂರುಗಳಲ್ಲಿ ವಾಸಿಸುವ ಹಿರಿಯರಿಗಾಗಲಿ ಆಪ್ತೇಷ್ಟರಿಗಾಗಲಿ, ಇನ್ನಿತರರಿಗಾಗಲಿ ಸುದ್ದಿ ಸಂಗತಿಗಳನ್ನು ತಿಳಿಸುವದಿದೆಯೆಂದು ತಿಳಿಯಿರಿ. ಅವರಿದ್ದಲ್ಲಿಗೇ ಯಾರನ್ನಾದರೂ ಕಳಿಸುವದೆಂದರೆ ವೆಚ್ಚದ ಮಾತಾಗುವದು. ಇಂಥ ಪ್ರಸಂಗದಲ್ಲಿ ಯಾವ ಉಪಾಯ ಮಾಡುವಿರಿ? ಪತ್ರ ಬರೆದು ಅಂಚೇಡಬ್ಬಿಯಲ್ಲಿ ಚೆಲ್ಲುತ್ತೇವೆ. ಸರಿ. ಅಂಚೇಡಬ್ಬಿಯ ಬಣ್ಣ ಯಾವದಿರುತ್ತದೆ? ಕೆಂಪು. ಭಲೆ ಸರಿಯಾದ ಉತ್ತರ. ಬರೆಯುವ ಪತ್ರಗಳನ್ನು ಹೇಗೆ ದೊರಕಿಸುವಿ?

ಇಲ್ಲಿದೆ ನೋಡಿರಿ, ಬರೆಯುವ ಕಾರ್ಡು. ಇದರ ಬೆಲೆ ೩ ದುಡ್ಡು. ಬಹಳ ಸಂಗತಿಯನ್ನಾಗಲಿ, ಬೇರೆಯವರಿಗೆ ತಿಳಿಯಬಾರದ ಸಂಗತಿಯನ್ನಾಗಲಿ ಬಿಳಿಯ ಹಾಳಿಯಲ್ಲಿ ಬರೆದು ಅಂಚೇಕಚೇರಿಯವರು ಕೊಟ್ಟ ಪಾಕೀಟಿನಲ್ಲಿ ಹಾಕಿ ಅಂಟು ಹಚ್ಚಿ ಬಂದು ಮಾಡಬೇಕು. ಪಾಕೀಟಿನ ಬೆಲೆ ಎಷ್ಟಿರುತ್ತದೆ? ೨ ಆಣೆ. ಇದೋ ಇವು ಅಂಚೇ ತಿಕೀಟುಗಳು. ೧ ದು, ೨ ದು, ೩ ದು, ೧ ಆ, ೨ ಆ, ೧ ರೂ, ಇತ್ಯಾದಿ ಬೇರೆ ಬೇರೆ ಬೆಲೆಯವು ತಿಕೀಟುಗಳಿರುತ್ತವೆ. ಇಂದು ಅಂಚೇ ಕಚೇರಿಯ ಆಟವನ್ನು ಆಡೋಣ.

ನಿಮ್ಮಲ್ಲಿ ಒಬ್ಬನು "ಪೋಸ್ಟ ಮಾಸ್ತರ" ನಾಗಲಿ. ಉಳಿದವರು ಕಾರ್ಡು ಪಾಕೀಟುಗಳನ್ನು ಬೇಡುವವರಾಗಲಿ. ಪೋಸ್ಟಮಾಸ್ತರನಲ್ಲಿ ಕಾರ್ಡು ಪಾಕೀಟು

ತಿಕೀಟುಗಳೂ ಹಣವೂ ಇರಲಿ. (ಹಳೆಯುವನ್ನು ಸಂಗ್ರಹಿಸುವದು ಯೋಗ್ಯ. ದೊರೆಯದಿದ್ದಲ್ಲಿ ಆ ಆ ಅಳತೆ ಕಾಗದಗಳನ್ನು ಕತ್ತರಿಸಿಕೊಂಡು ಸ್ಥೂಲಾಕೃತಿ ಬರೆದು, ಬೆಲೆ ಕಾಣಿಸಿ ಇಟ್ಟುಕೊಳ್ಳತಕ್ಕದ್ದು. ನಾಣ್ಯಗಳ ಬದಲಾಗಿ ಆಯಾ ಆಕಾರದ ಕಾಗದದ ತುಂಡುಗಳ ಮೇಲೆ ಬೆಲೆ ಬರೆದು ಉಪಯೋಗಿಸಬೇಕು.) ಉಳಿದವರಲ್ಲಿಯೂ ನಾಣ್ಯಗಳಿರಲಿ.




ಒಬ್ಬನು ಪೋಸ್ಟಮಾಸ್ತರನಲ್ಲಿಗೆ ಹೋಗಿ ತನಗೆ ಬೇಕಾದ ಕಾರ್ಡ್ಡು, ಪಾಕೀಟು, ತಿಕೀಟುಗಳನ್ನು ಬೇಡಬೇಕು. ಮತ್ತು ಬೇಡುವವನೂ ಪೋಸ್ಟಮಾಸ್ತರನೂ ಕೂಡಿಯೇ ಲೆಕ್ಕ ಮಾಡಬೇಕು. ಅವರು ಮಾಡುವ ಲೆಕ್ಕವನ್ನು ಉಳಿದವರು ನಿರೀಕ್ಷಿಸಬೇಕು. ತಪ್ಪುಗಳಾದಲ್ಲಿ ತಿದ್ದಬೇಕು. ಈ ರೀತಿ ಎಲ್ಲ ಮಕ್ಕಳೂ ಸರತಿಯಂತೆ ಅಂಚೇಕಟ್ಟಿಗೆ ಹೋಗಿ ತಮಗೆ ಬೇಕಾದುದನ್ನು ಪಡೆದುಕೊಂಡು ಹಣ ಕೊಡಬೇಕು. ತೀವ್ರ ಲೆಕ್ಕ ಮಾಡಲು ಪ್ರಯತ್ನಿಸಬೇಕು. ಪ್ರತಿಯೊಬ್ಬ ಬಾಲಕನೂ ಪೋಸ್ಟಮಾಸ್ತರನಾಗುವ ಸಂಧಿ ದೊರೆತ ಬಳಿಕ ಆಟವನ್ನು ಮುಗಿಸಬೇಕು.

ಈ ಆಟದಿಂದ ವ್ಯವಹಾರ ಚಾತುರ್ಯ, ಚಲಾವಣೆಯ ಜ್ಞಾನ ಮಕ್ಕಳಿಗೆ ಲಭಿಸುವದು.

## [೬] ಗಡಿಯಾರ

ಇವತ್ತಿನ ಆಟ ಗಡಿಯಾರಕ್ಕೆ ಸಂಬಂಧಿಸಿದುದು. ಆಟದ ಬೈಲಿಗೆ ಹೋಗುವಾಗ ಸಂಗಡ ಗಡಿಯಾರ, ಕರಿಯ ಹಲಿಗೆ (ಕುದುರೆ ಸಹಿತ), ಖಡು ಇವಿಷ್ಟನ್ನು ಸಂಗಡ ತೆಗೆದುಕೊಂಡು ಹೋಗಿರಿ. ಎಲ್ಲ ಮಕ್ಕಳಿಗೂ ಕಾಣುವಂತೆ ಕರಿಯ ಹಲಿಗೆಯನ್ನಿಡಿರಿ. ಕರಿಯ ಹಲಿಗೆಯ ಮೇಲೆ ಕೆಳಗೆ ಬರೆದಂತೆ ವೇಳಾಪತ್ರಿಕೆಯನ್ನು ಬರೆದಿಡಬೇಕು. (ಸ್ಥಾನಿಕ ಪರಿಸ್ಥಿತಿಯಂತೆ ತಮಗನುಕೂಲವಾದ ಬದಲಾವಣೆ ಮಾಡಿಕೊಳ್ಳಬಹುದು.)

**ವೇಳಾಪತ್ರಿಕೆ**

| ಮುಂಜಾವು | | ಸಂಜೆ | |
|---|---|---|---|
| ವೇಳೆ | ಕಾರ್ಯಕ್ರಮ | ವೇಳೆ | ಕಾರ್ಯಕ್ರಮ |
| ೭-೦ ಗಂ. | ಶಾಲೆ ಪ್ರಾರಂಭ | ೨-೦ ಗಂ. | ಶಾಲೆ ಪ್ರಾರಂಭ |
| ೮-೩೦ ಗಂ | ವಿಶ್ರಾಂತಿ | ೩-೩೦ ಗಂ. | ವಿಶ್ರಾಂತಿ |
| ೮-೪೦ ಗಂ. | ವಿಶ್ರಾಂತಿ ಮುಕ್ತಾಯ | ೩-೪೦ ಗಂ. | ವಿಶ್ರಾಂತಿ ಮುಕ್ತಾಯ |
| ೧೦-೦ ಗಂ. | ಶಾಲೆ ಬಿಡುವದು | ೫-೦ ಗಂ. | ಶಾಲೆ ಬಿಡುವದು |

ಒಬ್ಬ ಹುಡುಗನು ಗಡಿಯಾರ ತೆಗೆದುಕೊಂಡು ವೇಳಾಪತ್ರಿಕೆಯ ಬಳಿಯಲ್ಲಿದ್ದುಕೊಂಡು ಸಾವಕಾಶವಾಗಿ ಗಡಿಯಾರದ ಮುಳ್ಳುಗಳನ್ನು ತಿರುಗಿಸಬೇಕು. (ಗಡಿಯಾರ ದೊರೆಯದಿದ್ದಲ್ಲಿ ಆಯಾ ಗಂಟೆಗಳನ್ನು ಸೂಚಿಸುವ ಚಿತ್ರಗಳನ್ನು ಬರೆದು ರಟ್ಟುಗಳಿಗೆ ಅಂಟಿಸಬೇಕು. ಅವುಗಳನ್ನು ಕ್ರಮದಿಂದ ತೂಗಹಾಕಬೇಕು.) "೭ ಗಂಟೆ" ಗಡಿಯಾರದಲ್ಲಾದ ವೇಳೆ ನೋಡಿ ಶಾಲೆ ಪ್ರಾರಂಭವಾಯಿತೆಂದು ಮಕ್ಕಳೆಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಳ್ಳಬೇಕು. ಹೀಗೆ ವೇಳಾಪತ್ರಿಕೆ ಹಾಗೂ ಗಡಿಯಾರ ನೋಡುತ್ತ ಕಾರ್ಯಕ್ರಮ ಸಾಗಿಸಬೇಕು.

ಶಾಲೆಯ ವೇಳಾಪತ್ರಿಕೆಯಂತೆಯೇ ಬೇರೆ ಬೇರೆ ಸ್ಥಳಗಳ ಮತ್ತು ಸರಕಾರೀ ಕಚೇರಿಗಳ ವೇಳಾಪತ್ರಿಕೆಗಳನ್ನು ತಯಾರಿಸಿ ಅದರಂತೆ ಕಾರ್ಯಕ್ರಮ ಸಾಗಿಸಬಹುದು. ವೇಳಾಪತ್ರಿಕೆಯಲ್ಲಿ ಇನ್ನೂ ಅನೇಕ ಸಂಗತಿಗಳ ಸಮಾವೇಶ ಮಾಡಬಹುದು.

---

# ೮. ಪರೀಕ್ಷೆಯ ಕಾಗದಗಳು



( ಪ್ರತಿಯೊಂದು ಕಾಗದದಲ್ಲಿ ಮೊದಲಿನ ೩ ಲೆಕ್ಕಗಳು ಬಾಯಿಲೆಕ್ಕಗಳು )

## [೧]

(೧) ೧ ಪೈಗೆ ೧ ರಂತೆ ೫ ಆ. ೯ ಪೈಗಳಿಗೆ ಎಷ್ಟು ಸೂಜಿಗಳು ದೊರೆಯುವವು?

(೨) ೪ ಸೀರೆಗಳಿಗೆ ೪೪ ರೂ. ಆದರೆ ೧ ಸೀರೆಯ ಬೆಲೆ ಎಷ್ಟು ?

(೩) ೧ ಆಣೆಗೆ ೫ ರಬ್ಬರ 'ಬಲೂನು'ಗಳು ದೊರೆತರೆ ೧೪ ಆಣೆಗಳಿಗೆಷ್ಟು ?

(೪) ೧೯ ರೂ. ಗಳ ಸೀರೆ ೨೭ ರೂ. ಗಳ ಅರಿವೆ ಕೊಂಡು ಅಂಗಡಿಕಾರನಿಗೆ ಹತ್ತರ ೫ ನೋಟುಗಳನ್ನು ಕೊಟ್ಟರೆ ನಮಗೆ ತಿರುಗಿ ದೊರೆಯುವ ಹಣವೆಷ್ಟು?

(೫) ಪ್ರತಿಯೊಬ್ಬಳಿಗೆ ೨ ರೂ. ಬೆಲೆಯ ಜಂಪರು, ೪ ರೂ. ಬೆಲೆಯ ಪರಕಾರ ಈ ಪ್ರಕಾರ ೧೧ ಹರಿಜನ ಬಾಲಿಕೆಯರಿಗೆ ಅವರ ಪ್ರಗತಿಯನ್ನು ಮೆಚ್ಚಿ ಬಹುಮಾನವನ್ನು ಕೊಡಲಾಯಿತು. ಬಹುಮಾನ ಕೊಟ್ಟ ಉಡುಪು ತೊಡಪುಗಳ ಒಟ್ಟು ಬೆಲೆ ಎಷ್ಟು?

(೬) ರಾಮಪ್ಪನಲ್ಲಿದ್ದ ಎಮ್ಮೆಯಿಂದ ವಾರಕ್ಕೆ ೫ ಸೇ. ಬೆಣ್ಣೆಯೂ ಆಕಳಿನಿಂದ ೪ ಸೇ. ಬೆಣ್ಣೆಯೂ ದೊರೆಯುತ್ತದೆ. ಆತನಿಗೆ ೨ ತಿಂಗಳುಗಳಲ್ಲಿ ದೊರಕಿದ ಬೆಣ್ಣೆ ಎಷ್ಟು ?

(೭) ತಿಂಗಳಿಗೆ ೧೬ ರೂ. ಗಳಂತೆ ವರುಷದ ಮನೆ ಭಾಡಿಗೆ ಎಷ್ಟು ?

(೮) ಕಪಾಟಿನ ಪ್ರತಿಯೊಂದು ಖಾನೆಯಲ್ಲಿ ೪೦ ಪುಸ್ತಕಗಳಿವೆ. ೩ ಖಾನೆಗಳಲ್ಲಿದ್ದ ಪುಸ್ತಕಗಳನ್ನು ಹೊರತೆಗೆದು ಸರಿಯಾಗಿ ೨ ಗಂಟು ಕಟ್ಟಿದರೆ ಪ್ರತಿಯೊಂದು ಗಂಟಿನಲ್ಲಿದ್ದ ಪುಸ್ತಕಗಳೆಷ್ಟು ?

[೨]

(೧) $\frac{೧}{೧೬}$, $\frac{೧}{೮}$, $\frac{೧}{೨೪}$, ಈ ಅಪೂರ್ಣಾಂಕಗಳನ್ನು ಓದಿಹೇಳಿರಿ.

(೨) ೪ ರೂ. ಗಳಿಗೆ ೧ ವಾರಿನಂತೆ ೯ ವಾರ ಅರಿವೆ ಕೊಂಡು ಹಣ ಕೊಟ್ಟೆವು. ಆದರೂ ೫ ರೂ. ಉದ್ದರಿ ಉಳಿದರೆ ನಾವು ಅಂಗಡಿಕಾರನಿಗೆ ಕೊಟ್ಟ ಹಣವೆಷ್ಟು ?

(೩ ೬೯ + ೯ + ೮ = ?

(೪) ೮೩ ರೂ. ಬೆಲೆಯ ಸಾಯಕಲು, ೫ ರೂ. ಬೆಲೆಯ ದೀಪ ಕೊಂಡು ಅಂಗಡಿಕಾರನಿಗೆ ನೂರರ ೧ ನೋಟನ್ನು ಕೊಟ್ಟರೆ ನಮಗೆ ತಿರುಗಿ ದೊರೆಯುವ ಹಣವೆಷ್ಟು ?

(೫) ಗ್ರಾಮೋದ್ಯೋಗ ಸಂಘದವರು ೩ ದಿನಗಳಲ್ಲಿ ಕ್ರಮದಿಂದ ೫೮೯೮, ೩೨೬೫, ೯೩೬ ಲಡಿಗಳನ್ನು ಕೊಂಡರು. ಮೂರೂ ದಿನಗಳಲ್ಲಿ ಕೂಡಿ ಕೊಂಡ ಒಟ್ಟು ಲಡಿಗಳೆಷ್ಟು ?

(೬) ಒಂದು ಪೆಟ್ಟಿಗೆಯಲ್ಲಿ ೫ ರೂ. ಗಳ ೧೨೬ ನೋಟುಗಳೂ, ೧೦ ರೂ. ಗಳ ೮೪ ನೋಟುಗಳೂ ಇವೆ. ಆದರೆ ಆ ಪೆಟ್ಟಿಗೆಯಲ್ಲಿದ್ದ ಹಣವೆಷ್ಟು ?

(೭) ಒಂದು ರೀಮಿನಲ್ಲಿ ೪೮೦ ಕಾಗದಗಳಿರುತ್ತವೆ. ಆದರೆ ೩೫ ರೀಮುಗಳಲ್ಲಿರುವ ಕಾಗದಗಳೆಷ್ಟು ?

(೮) ೧೨ ಕಾಗದಗಳಿಗೆ ಒಂದರಂತೆ ಅಭ್ಯಸನ ಪುಸ್ತಕಗಳನ್ನು ಕಟ್ಟಿದರೆ ೩ ರೀಮು ಕಾಗದಗಳಿಂದ ಎಷ್ಟಾಗುವವು ?

[೩]

(೧) ೨ ರೂ. ಗಳ $\frac{೧}{೮}$ ಅಂದರೆ ಎಷ್ಟು ಆಣೆಗಳು ?

(೨) ೧೭ ರೂ. ಗಳಿಗೆ ಒಂದರಂತೆ ೫ ಸೀರೆ ಹಾಗೂ ೧೦ ರೂ. ಬೆಲೆಯ ೧ ಖಣ ಕೊಂಡರೆ ನಾವು ಕೊಡಬೇಕಾದ ಹಣವೆಷ್ಟು ?

(೩) ೫೦ ನೇರಿಲಗಳಲ್ಲಿ ಪ್ರತಿಯೊಬ್ಬನಿಗೆ ೬ ರಂತೆ ಕೊಟ್ಟರೆ ಎಷ್ಟು ಮಕಳಿಗೆ ಸಾಲುವವು ? ಎಷ್ಟು ಹಣ್ಣು ಉಳಿಯುವವು?

(೪) ೧೨ + ೫೪ ಮತ್ತು ೩೯ × ೫ ಇವುಗಳ ಬೇರೀಜು ಮಾಡಿರಿ.

(೫) ೮೪ ರೂ. ಗಳಿಗೆ ೧ ಆಕಳು, ೧೭೫ ರೂ. ಗಳಿಗೆ ೧ ಎಮ್ಮೆ ಮಾರಿ, ಬಂದ ಹಣದಿಂದ ೨೧೯ ರೂ. ಕೊಟ್ಟು ೧ ಎತ್ತಿನ ಜೋಡಿ ಕೊಂಡರೆ ಈಗ ನಮ್ಮಲ್ಲಿ ಉಳಿದ ಹಣವೆಷ್ಟು ?

(೬) ೯ ರೂ. ಗಳಿಗೆ ೧ ರಂತೆ ೨೮ ಟ್ರಂಕುಗಳನ್ನು ಕೊಂಡು ೧೦ ರೂ. ಗಳಿಗೆ ೧ ರಂತೆ ಮಾರಿದರೆ ಎಷ್ಟು ಹೆಚ್ಚಿಗೆ ಹಣ ದೊರೆಯಿತು?

(೭) ೩೨೭ ರೂ. ಗಳಿಗೆ ದುಡ್ಡುಗಳೆಷ್ಟಾಗುವವು ?

(೮) ೧೩ ರೂ. ಗಳಿಗೆ ೧ ರಂತೆ ೮೩೨ ರೂ. ಗಳಿಗೆ ಬೆಲ್ಲದ ಪೆಂಟೆಗಳು ಎಷ್ಟು ದೊರೆಯುವವು ?

[೪]

(೧) ೭ ಆಣೆ ಬಟಾಟೆ ಕೊಂಡು ೨ ರೂ ನೋಟು ಕೊಟ್ಟರೆ ನಮಗೆ ತಿರುಗಿ ಎಷ್ಟು ಹಣ ದೊರೆಯುತ್ತದೆ ?

(೨) ಈಗ ಶಿವಶಂಕರನ ವಯಸ್ಸು ೧೪ ವರುಷ ಇದೆ. ೬ ತಿಂಗಳ ಹಿಂದೆ ಆತನ ವಯಸ್ಸು ಎಷ್ಟಿತ್ತು ?

(೩) ೮ ಹೂವುಗಳಿಗೆ ೧ ರಂತೆ ೮ ಮಾಲೆಗಳನ್ನು ತಯಾರಿಸಿದೆವು. ಆದರೂ ೪ ಹೂವುಗಳು ಉಳಿದಿದ್ದರೆ ನಾವು ಕೊಂಡು ತಂದ ಹೂವುಗಳೆಷ್ಟು ?

(೪) ೧ ಮೋಟಾರು ೧೭ ಮೈಲು ಹೋಗಲಿಕ್ಕೆ ೧ ಗ್ಯಾಲನ ಎಣ್ಣೆ ಬೇಕಾಗುತ್ತದೆ. ಆದರೆ ೯೨೦೭ ಮೈಲು ಹೋಗಲಿಕ್ಕೆ ಎಷ್ಟು ಗ್ಯಾಲನ ಎಣ್ಣೆ ಬೇಕಾಗುವದು?

(೫) ೧ ಆಣೆಗೆ ೧ ರಂತೆ ೮೦೦ ರಬ್ಬರುಗಳನ್ನು ತರಿಸಿದೆವು. ಅವುಗಳಿಗಾಗಿ ನಾವು ಕೊಟ್ಟ ರೂಪಾಯಿಗಳೆಷ್ಟು ?

(೬) ೪ ಮೋಟಾರುಗಳನ್ನು ತರಿಸಿತು. ಪ್ರತಿಯೊಂದರ ಬೆಲೆ ೨೫೨೫ ರೂ. ಇದ್ದರೆ ೪ ಮೋಟಾರುಗಳ ಒಟ್ಟು ಬೆಲೆ ಎಷ್ಟು ?

(೭) ಬಸಪ್ಪ ರೈತನು ಪ್ರತಿಯೊಂದು ಎತ್ತಿಗೆ ೪೦೫ ರೂ. ಗಳಂತೆ ತೆಕ್ಕೊಂಡು ೧ ಎತ್ತಿನ ಜೋಡಿಯನ್ನೂ ೩೪೫ ರೂ. ತೆಕ್ಕೊಂಡು ೧ ಚಕ್ಕಡಿಯನ್ನೂ ಮಾರಿದನು. ಆತನಿಗೆ ದೊರೆತ ಒಟ್ಟು ಹಣವೆಷ್ಟು ?

(೮) ಶಂಕರರಾಯರು ತಮ್ಮಲ್ಲಿದ್ದ ೪೦ ಚೀಲ ರಾಗಿಯಲ್ಲಿ ೨೩ ಚೀಲ ರಾಗಿಯನ್ನು ೧೯ ರೂ. ಗಳಗೆ ಚೀಲದಂತೆ ಮಾರಿದರು. ಉಳಿದ ಚೀಲಗಳನ್ನು ೨೧ ರೂ. ಗಳಿಗೆ ಚೀಲದಂತೆ ಮಾರಿದರೆ ಅವರಿಗೆ ದೊರೆತ ಒಟ್ಟು ಹಣವೆಷ್ಟು?

[೫]

(೧) ೩ ವಾರ ೩ ದಿನಗಳಿಗೆ ಎಷ್ಟು ದಿವಸಗಳಾಗುವವು?

(೨) ೧೮ ಸುತ್ತು ನೂಲು ಎಂದರೆ ಎಷ್ಟು ಫೂಟು ಆಗುತ್ತದೆ ?

(೩) ೯೬ ಇಂಚುಗಳಿಗೆ ಫೂಟುಗಳೆಷ್ಟು ?

(೪) ೩ * ೫ + ೭೯೫ = ೧೧೦೦. ಹೂವಿದ್ದಲ್ಲಿ ತುಂಬಿರಿ.

(೫) ೮೨೫ ರೂ. ಬೆಲೆಯ ವಸ್ತುಗಳಲ್ಲಿ ಮುಂಜಾನೆ ೩೨೫ ರೂ. ಗಳಷ್ಟು, ಮಧ್ಯಾಹ್ನದಲ್ಲಿ ೪೦೧ ರೂ. ಗಳಷ್ಟು ವಸ್ತುಗಳನ್ನು ಮಾರಲಾಯಿತು ಉಳಿದ ವಸ್ತುಗಳ ಬೆಲೆ ಎಷ್ಟಾಗುತ್ತದೆ ?

(೬) ೫೯೯—೧೬೫.: ಬಂದ ಬಾಕಿಗೆ ೯ ರಿಂದ ಭಾಗಿಸಿರಿ.

(೭) ೨೫ ರಾಗದ ಪೆಟ್ಟಿಗೆಗಳನ್ನು ೭೭೫ ರೂ. ಗಳಿಗೆ ಕೊಂಡು ೩೬ ರೂ. ಗಳಿಗೆ ೧ ರಂತೆ ಮಾರಿದರೆ ಹೆಚ್ಚಿಗೆ ದೊರೆಯುವ ಹಣವೆಷ್ಟು ?

(೮) ೮೫೩೧ ಬರೆಯಲಿಕ್ಕೆ ಹೇಳಿದರೆ ಒಬ್ಬ ಬಾಲಕನು ಐದು ಸಾವಿರ ಎಂಟು ನೂರಾ ಮೂವತ್ತೊಂದು ಎಂದು ಬರೆದನು. ಆತನು ಬರೆದ ಸಂಖ್ಯೆ ಹೇಳಿದ ಸಂಖ್ಯೆಗಿಂತ ಎಷ್ಟು ಕಡಿಮೆಯಿರುವದು?

[೬]

(೧) ೮೮೦೮ ಈ ಸಂಖ್ಯೆಯಲ್ಲಿ ೦ ಇದ್ದಲ್ಲಿ ೮ ಬರೆದರೆ ಹೊಸ ಸಂಖ್ಯೆ ಎಷ್ಟರಿಂದ ಹೆಚ್ಚಾಯಿತು ?

(೨) ೧ ಕೋಟಿಗೆ ೧೧ ರೂ. ಬೆಲೆ. ಆದರೆ ೧೧ ಕೋಟುಗಳ ಬೆಲೆ ಎಷ್ಟಾಗುತ್ತದೆ?

(೩) ೪ ರೂ. ೧೨ ಆಣೆಗಳಲ್ಲಿ        ಕೂಡಿಸಿದರೆ ೫ ರೂ. ಆಗುವದು ?

(೪) ೬೫ + ೮೫ − ? = ೯೬.

(೫) ೯೦೫ ಮಾವುಗಳಲ್ಲಿ, ೧೨೫ ಹಣ್ಣುಗಳಂತೆ ೭ ಬುಟ್ಟಿಗಳಲ್ಲಿ ತುಂಬಿದೆವು. ಹೆಚ್ಚಿಗೆ ಉಳಿದ ಹಣ್ಣುಗಳೆಷ್ಟು ?

(೬) ೭ ರೂ. ದರದ ಕಲ್ಲೆಣ್ಣೆಯ ಡಬ್ಬಿಗಳಿದ್ದು ಅವುಗಳ ಬೆಲೆ ೫೧೧ ರೂ. ಆಗುತ್ತದೆ. ಆದರೆ ಅಂಗಡಿಯಲ್ಲಿದ್ದ ಡಬ್ಬಿಗಳೆಷ್ಟು ?

| (೭) | (೮) | (೯) |
|---|---|---|
| ೯೬ | ೧೦೯ | ೪೭೦ |
| —** | + *** | —*** |
| ೪೯ | ೨೦೬ | ೦೯೬ |

[೭]

(೧) ೮ ತೆಂಗುಗಳ ಬೆಲೆ ೧ ರೂ. ಆದರೆ ೭೨ ತೆಂಗುಗಳ ಬೆಲೆ ಎಷ್ಟು ?

(೨) ೪೦ ರೂ. ಗಳಲ್ಲಿ ೮ ರೂ. ಜೋಳ, ೯ ರೂ. ಅಕ್ಕಿ ತರಿಸಿದರೆ ಉಳಿದ ಹಣ ಎಷ್ಟು ?

(೩) ೧ ಚವಲಿಗೆ ಒಂದರಂತೆ ೧೨ ರೂ. ಗಳಿಗೆ ಎಷ್ಟು ಹಣಿಗೆಗಳು ದೊರೆಯುತ್ತವೆ ?

(೪) ೭೩೬ ಚವಲಿಗಳಿಗೆ ರೂಪಾಯಿಗಳೆಷ್ಟಾಗುವವು ?

(೫) ೮೦೦ ರಲ್ಲಿ ೬೮ × ೮ ಈ ಗುಣಾಕಾರವನ್ನು ಕಳೆಯಿರಿ.

(೬) ಒಂದು ಗಡಿಯಾರಕ್ಕೆ ೧೨೪ ರೂ. ಮತ್ತು ಅದಕ್ಕಿಂತ ೨೭೫ ರೂ. ಹೆಚ್ಚು ಕೊಟ್ಟು ೧ ಮಾತಾಡುವ ಯಂತ್ರ (ರೇಡಿಯೋ) ಕೊಂಡಿತು. ಎರಡೂ ವಸ್ತುಗಳ ಬೆಲೆ ಎಷ್ಟಾಗುತ್ತದೆ ?

(೭) ಒಬ್ಬ ಕುರುಬನು ೧೧ ರೂ. ಗಳಿಗೆ ೧ ರಂತೆ ೨೨೨ ಕುರಿಗಳನ್ನು, ೯ರೂ. ಗಳಿಗೆ ೧ ರಂತೆ ೧೪೯ ಆಡುಗಳನ್ನು ಮಾರಿದನು. ಆತನಿಗೆ ದೊರೆತ ಹಣವೆಷ್ಟು?

(೮) ೮ × ? = ೧೪೪.        (೯) ? ÷ ೧೬ = ೧೩

[೮]

(೧) ೨೪ ರೂ. ಗಳ ೧ ವೆಚ್ಚ ಮಾಡಿದರೆ ಉಳಿಯುವ ಹಣವೆಷ್ಟು ?

(೨) ೧ ಆಣೆಗೆ ೯ ಗುಂಡುಗಳು. ಆದರೆ ೫೬ ಗುಂಡುಗಳಿಗೆ ಎಷ್ಟು ಆಣೆಗಳು?

(೩) ಅರ್ಧ ರೂಪಾಯಿಗೆ ೧ ರಂತೆ ೧೯ ರೂ. ಗಳಿಗೆ ಎಷ್ಟು ಕಲ್ಲಂಗಡಿ ಹಣ್ಣು ಬರುತ್ತವೆ?

(೪) ೧ ಥಾನಿನಲ್ಲಿ ೩೬ ವಾರ ಅರಿವೆ ಇರುತ್ತದೆ. ಇಂಥ ೧೪ ಥಾನು ಅರಿವೆ ಇದೆ. ೪ ವಾರಿಗೆ ೧ ಕೋಟಿನಂತೆ ೧೪ ಥಾನು ಅರಿವೆಯಿಂದ ಎಷ್ಟು ಕೋಟು ಗಳಾಗುವವು?

(೫) ೯೯೯ ಈ ಸಂಖ್ಯೆಯಲ್ಲಿಯ ಪ್ರತಿಯೊಂದು ೯ ರ ಬೆಲೆ ಎಷ್ಟೆಷ್ಟು?

(೬) ೧ ರೂ. ಗೆ ೩ ಸೇರು ಕೊಬ್ಬರಿ ಎಣ್ಣೆ. ಆದರೆ ೫೧೩ ಸೇರು ಕೊಬ್ಬರಿ ಎಣ್ಣೆಯ ಬೆಲೆ ಎಷ್ಟಾಗುತ್ತದೆ?

(೭) ಕೆಳಗಿನ ಕೋಷ್ಟಕಗಳಲ್ಲಿ ತೆರವಿದ್ದ ಸ್ಥಳವನ್ನು ತುಂಬಿರಿ.

| ಹಾಜರಿದ್ದ ಹುಡುಗರು | ರಜೆ ಪಡೆದ ಹುಡುಗರು | ಅಜಾರಿಯ ಹುಡುಗರು | ಗೈರಿದ್ದ ಹುಡುಗರು | ಒಟ್ಟು ಹುಡುಗರು |
|---|---|---|---|---|
| ೫೭೮ | ೧೨೫ | ೪೮ | .... | ೮೦೭ |

[೯]

(೧) ೩೦೦ — ೯ — ೮ = ?

(೨) ೧ ಆಣೆಗೆ ೧ ರಂತೆ ೧೨೮ ಡಾಳಿಂಬರ ಹಣ್ಣುಗಳಿಗೆ ಬೆಲೆ ರೂ. ಎಷ್ಟು?

(೩) ೪೦ ಆಣೆಗಳಿಗೆ ದುಡ್ಡುಗಳೆಷ್ಟು ?

(೪) ಗಣೇಶಭಟ್ಟರು ೧೨೫ ರೂ. ಗಳಿಗೆ ೧ ತೊಲಿಯಂತೆ ೨೨ ತೊಲಿ ಬಂಗಾರ ಕೊಳ್ಳಲು ಎಷ್ಟು ಹಣ ಕೊಟ್ಟಿರಬೇಕು?

(೫) ೫೦೮೫ ರೂ. ಗಳಿಂದ ೫ ರೂ. ನೋಟುಗಳು ಎಷ್ಟಾಗುವವು?

(೬) ೨೬೦ ಯಾರ್ಡು ಉದ್ದವಿದ್ದ ೧೯೫ ಯಾರ್ಡು ಅಗಲವಿರುವ ಹೊಲವನ್ನು ೧ ಸುತ್ತು ನಡೆದು ಬರಲಿಕ್ಕೆ ನಾವು ಎಷ್ಟು ಯಾರ್ಡು ಹೋಗಬೇಕಾಗುತ್ತದೆ?

(೭) ತೋಟಿಗೇರ ಗುರುಪಾದಪ್ಪನು ಒಂದು ಗಿಡದಿಂದ ೪೦೩೫ ಮಾವಿನ ಕಾಯಿಗಳನ್ನೂ ಇನ್ನೊಂದರಿಂದ ೨೯೦೯ ಮಾವಿನಕಾಯಿಗಳನ್ನೂ ಇಳಿಸಿ ಆಗೇನೇ ರೂಪಾಯಿಗೆ ೧೬ ರಂತೆ ಮಾರಿಬಿಟ್ಟನು. ಆದರೆ ಆತನಿಗೆ ದೊರೆತ ಹಣವೆಷ್ಟು?

(೮) ಮಂಡ್ಯ ಸಕ್ಕರೆ ಕಾರಖಾನೆಯವರು ೨೫೯೬ ರೂ. ಬೆಲೆಯ ಬೆಲ್ಲವನ್ನೂ ಅದರ ೩ ಪಟ್ಟು ಬೆಲೆಯ ಸಕ್ಕರೆಯನ್ನೂ ಮಾರಿದರು. ಎರಡರಿಂದಲೂ ದೊರೆತ ಒಟ್ಟು ಹಣವೆಷ್ಟು?

[೧೦]

(೧) ರಾಮಣ್ಣ ಮಾಸ್ತರರ ತಿಂಗಳ ಸಂಬಳ ೯೦ ರೂ. ಆದ್ದ[illegible] ತಿಂಗಳ ಸಂಬಳದಿಂದ ಅವರಿಗೆಷ್ಟು ರೂಪಾಯಿ ದೊರೆಯುವವು?

(೨) ೭೦ ರಲ್ಲಿ ೯ನ್ನು ೩ ಸಾರೆ ಕಳೆಯಿರಿ. ಬಾಕಿ ಎಷ್ಟು ?

(೩) ೧ ಪುಡಿಕೆಯಲ್ಲಿ ೮ ಪೇಪರಮಿಂಟುಗಳಿವೆ. ಇಂಥ ೧೬ ಪುಡಿಕೆಗಳಿದ್ದು ಪ್ರತಿಯೊಬ್ಬ ಬಾಲಿಕೆಗೆ ೪ ರಂತೆ ಹಂಚಲು ವರ್ಗದ ಎಲ್ಲ ಬಾಲಿಕೆಯರಿಗೂ ದೊರೆಯಿತು. ಆದರೆ ವರ್ಗದಲ್ಲಿದ್ದ ಬಾಲಿಕೆಯರ ಸಂಖ್ಯೆ ಎಷ್ಟು ?

(೪) ೧ ಕಾರಖಾನೆಯಲ್ಲಿ ೪೪೩ ಗಂಡಸರೂ ೨೩೮ ಹೆಂಗಸರೂ ಉಳಿದವರು ಹುಡುಗರೂ ಕೆಲಸ ಮಾಡುತ್ತಾರೆ. ಇನ್ನೂ ಆ ಕಾರಖಾನೆಯಲ್ಲಿ ಒಟ್ಟಿಗೆ ೯೮೭ ಕೆಲಸಗಾರರಿದ್ದರೆ ಹುಡುಗರೆಷ್ಟು ?

(೫) [ಅ] ? ÷ ೮ = ೫ ಬಾಕಿ ೬.
[ಬ] ೬೮ ÷ ? = ೯ ಬಾಕಿ ೫.

(೬) [ಅ] ೧೪೭೬
+ ೩೯೦೫
+ ........
೭೪೭೮

[ಬ] ........
× ೫
೭೧೦೫

(೭) ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರಾದ ಶ್ರೀ ವಿದ್ಯಾರಣ್ಯರು ಸನ್ ೧೩೩೬ ನೇ ಇಸ್ವಿಯಲ್ಲಿ ವಿಜಯನಗರ ರಾಜ್ಯ ಸ್ಥಾಪಿಸಿದರು. ಇದು ಇವತ್ತಿಗೆ ಎಷ್ಟು ವರುಷಗಳ ಹಿಂದಿನ ಸಂಗತಿ ?

(೮) ಕಾಳಿಂಗಪ್ಪನು ಈ ವರುಷ ೨೯ ಚೀಲ ಭತ್ತ ಬೆಳೆದನು. ಅದರಲ್ಲಿ ಆತನು ೧೨ ಚೀಲ ಭತ್ತ ಮನೆಗಿಟ್ಟುಕೊಂಡು ಹೆಚ್ಚಾದುದನ್ನು ೧ ಚೀಲಕ್ಕೆ ೩೬ ರೂ. ಗಳಂತೆ ಮಾರಿದನು. ಆದರೆ ಆತನಿಗೆ ದೊರೆತ ಹಣವೆಷ್ಟು ?

ಪಠ್ಯಪುಸ್ತಕ ಸಮಿತಿಯಿಂದ ಮಂಜೂರಾಗಿವೆ !!!



# ನೂತನ ಗಣಿತ



ಪ್ರಾಥಮಿಕ ಶಾಲೆಗಳಿಗಾಗಿ

★ ಮೊದಲನೆಯ ವರ್ಗಕ್ಕಾಗಿ .... ೦—೬—೦

★ ಎರಡನೆಯ ವರ್ಗಕ್ಕಾಗಿ .... ೦—೮—೦

★ ಮೂರನೆಯ ವರ್ಗಕ್ಕಾಗಿ .... ೦-೧೦—೦

★ ನಾಲ್ಕನೆಯ ವರ್ಗಕ್ಕಾಗಿ .... ೦-೧೨—೦

ಪ್ರಾಥಮಿಕ, ಮಾಧ್ಯಮಿಕ ಶಾಲೆಗಳಿಗಾಗಿ

★ ಐದನೆಯ ವರ್ಗಕ್ಕಾಗಿ .... ೦-೧೪—೦

★ ಆರನೆಯ ವರ್ಗಕ್ಕಾಗಿ .... ೧—೦—೦

★ ಏಳನೆಯ ವರ್ಗಕ್ಕಾಗಿ .... ೧-೧೨—೦

ಹೊಸ ಕಾಲಕ್ಕೆ ಹೊಸ ಉಪಕ್ರಮದ ಗಣಿತಗಳು!!!

ವ್ಯಾಪಾರಿಗಳಿಗೆ ಧಾರಾಳ ಕಮೀಶನ್!

ಮಾರಾಟಗಾರರು:

**ಆಕಳವಾಡಿ ಬುಕ್‌ಡಿಪೋ, ಧಾರವಾಡ.**